# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಈ ಸಂಚಿಕೆಯಿಂದ ಎಲ್ಲರೂ ಅಂದುಕೊಂಡ ಹಾಗೆ "ಕರಡಿ ಕೆಂಗಣ್ಣ" ಬಣ್ಣದ ಚಿತ್ರಗಳೊಂದಿಗಿನ ಹೊಸ ಧಾರಾವಾಹಿ ಪ್ರಾರಂಭವಾಗಿದೆ. ಈ ಮೊದಲಿನವುಗಳಂತೆಯೇ ಇದು ಕೂಡಾ ನಮ್ಮ ಓದುಗರಿಗೆ ಮೆಚ್ಚುಗೆಯಾಗುವುದೆಂದು ನಂಬುತ್ತೇವೆ. ಎರಡನೆಯದಾಗಿ ಪಂಚತಂತ್ರದ 'ಲಬ್ಧಪ್ರಣಾಶ' ವಿಭಾಗವೂ ಇದರಲ್ಲಿ ಪ್ರಾರಂಭವಾಗುತ್ತದೆ. ಇದು ಕೂಡಾ ಮನಸ್ಸಿಗೆ ನಾಟುವ ಕಿಡಿಗತೆಗಳಿಂದ ರಂಜಿಸುವಂತಹ ಅಮರ ಕಥೆಗಳು. ವಿದ್ಯಾರ್ಥಿಗಳಿಗಿರುವ ಪರೀಕ್ಷೆಯಂತೆ ಸಾಮಾನ್ಯ ಪ್ರಜೆಗಳಿಗೂ ಜೀವನದಲ್ಲಿ ಪರೀಕ್ಷೆಗಳಿವೆ ಎಂಬುದನ್ನು "ಅರ್ಥವಿಲ್ಲದ ಪರೀಕ್ಷೆ" ಎಂಬ ಬೇತಾಳ ಕಥೆ ಸೂಚಿಸುತ್ತದೆ. ಈ ಪರೀಕ್ಷೆಯಲ್ಲಿ ರಾಜನು ಸೋತಿದ್ದಾನೆ ಪಾಪ. ಪೂರ್ವಾಪರಯೋಚನೆ ಮಾಡದೆ ಆಶೆಯಿಂದ ಆತುರಪಟ್ಟು ಪ್ರವರ್ತಿಸಿದರೆ ಸೋಲದೆ ಮತ್ತೇನಾದೀತು?

ಸಂಪುಟ: ೬೧ ಆಗಸ್ಟ್ '೭೮ ಸಂಚಿಕೆ: ೨

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦






ಯೋಹಿ ದತ್ವಾ ದ್ವಿಪಶ್ರೇಷ್ಠಂ
ಕಕ್ಷ್ಯಾಯಾಂ ಕುರುತೇ ಮನಃ
ರಜ್ಜು ಸ್ನೇಹೇನ ಕಿಂ ತಸ್ಯ
ತ್ಯಜತಃ ಕುಂಜರೋತ್ತಮಂ? ೧.

ಶ್ರೇಷ್ಠವಾದ ಆನೆಯನ್ನು ದಾನಮಾಡುವಾಗ ಅದನ್ನು ಕಟ್ಟಿದ ಹಗ್ಗಕ್ಕಾಗಿ ತಳಮಳಿಸಿದರೆ ಏನರ್ಥ?

ಸುದಾತ್ರ ದಾನಾಚ್ಚ ಭವೇದ್ಧನಾಢ್ಯೋ
ಧನ ಪ್ರಭಾವೇಣ ಕರೋತಿ ಪುಣ್ಯಂ
ಪುಣ್ಯ ಪ್ರಭಾವಾತ್ಸುರ ಲೋಕವಾಸೀ
ಪುನರ್ಧನಾಢ್ಯಃ ಪುನರೇವ ಭೋಗೀ ೨.

ಸತ್ಪಾತ್ರ ದಾನದಿಂದ ಧನವಂತನಾಗುವನು. ಧನವಿರುವುದರಿಂದ ಪುಣ್ಯ ಮಾಡುವನು. ಪುಣ್ಯದಿಂದ ಸ್ವರ್ಗ ಪಡೆಯುವನು. ಮತ್ತೆ ಧನವಂತನಾಗಿ ಭೋಗಗಳನ್ನು ಅನುಭವಿಸುವನು.

ಕುಪಾತ್ರ ದಾನಾಚ್ಚ ಭವೇದ್ದರಿದ್ರೋ
ದಾರಿದ್ರ್ಯ ದೋಷೇಣ ಕರೋತಿ ಪಾಪಂ
ಪಾಪ ಪ್ರಭಾವಾ ನ್ನರಕಂ ಪ್ರಯಾತಿ
ಪುನರ್ದರಿದ್ರಃ ಪುನರೇವ ಪಾಪೀ ೩.

ಅಪಾತ್ರ ದಾನದಿಂದ ದರಿದ್ರನಾಗುವನು. ದರಿದ್ರನಾಗಿ ಪಾಪ ಮಾಡುವನು. ಪಾಪಗಳಿಂದ ನರಕಕ್ಕೆ ಹೋಗುವನು. ತಿರುಗಿ ಪಾಪಿಯಾಗಿ ಹುಟ್ಟಿ ತಿರುಗಿ ದರಿದ್ರನಾಗುವನು.

ದಾನ




೬೧

"ಕೈಗೆ ಸಿಕ್ಕಿದ ವಸ್ತು ಮೂಢತನದಿಂದ ಜಾರಿ ಹೋಗಿಬಿಡುತ್ತದೆ. ಒಂದು ಮೊಸಳೆಗೆ ಲಭಿಸಿದ ವಿಶೇಷ ವಸ್ತು ಸಾಧಾರಣ ಮಂಗನ ಬುದ್ಧಿವಂತಿಕೆಯಿಂದ ಕೈಜಾರಿತು" ಎಂದನು ವಿಷ್ಣುಶರ್ಮ.

ಅತ್ಯಾಸಕ್ತಿಯಿಂದ ಅವನು ಹೇಳುವ ಕಥೆಗಳನ್ನು ಕೇಳುತ್ತಿದ್ದ ರಾಜಕುಮಾರರು, "ಆ ಕಥೆಯನ್ನು ಕೂಡಾ ನಮಗೆ ಹೇಳಿರಿ" ಎಂದು ಕೇಳಿಕೊಂಡರು. ವಿಷ್ಣುಶರ್ಮನು ಹೀಗೆ ಹೇಳಿದನು:

### ಮಂಗ ಮೊಸಳೆಗಳ ಕಥೆ

ಸಮುದ್ರದ ಬದಿಯಲ್ಲಿ ಒಂದು ಅಳಿವೆಯ ಹತ್ತಿರ ಆಳವಾದ ಪಾಯದ ಬದಿಯಲ್ಲಿ ಎತ್ತರವಾದೊಂದು ನೇರಳೆ ಮರವಿದ್ದಿತು. ಆ ಮರದ ತುಂಬಾ ಗೊಂಚಲು ಗೊಂಚಲುಗಳಾಗಿ ಹಣ್ಣುಗಳಾಗುತ್ತಿದ್ದುವು. ರಕ್ತಮುಖವೆಂಬ ಒಂದು ಮಂಗವು ಆ ಮರದ ಮೇಲೆ ವಾಸವಾಗಿತ್ತು. ನದಿಯಲ್ಲಿ ಕರಾಳಮುಖನೆಂಬ ಮೊಸಳೆಯೂ ಇತ್ತು.

ಒಂದು ದಿನ ಮೊಸಳೆ ತೀರದ ಬಳಿಗೆ ಈಜಿಕೊಂಡು ಬಂದು ನೇರಳೆ ಮರದ ಕೆಳಗಿನ ಮರಳಿನಲ್ಲಿ ಬಿಸಿಲಿಗೆ ಮೈಯೊಡ್ಡಿ ಮಲಗಿಕೊಂಡಿತ್ತು. ಆಗ ಮರದ ಮೇಲಿದ್ದ ರಕ್ತಮುಖಮಂಗವು ಅದನ್ನು ಮಾತಾಡಿಸಿ, "ಮೊಸಳಣ್ಣಾ, ನೀನೀಗ ನನ್ನ ಅತಿಥಿಯಾಗಿ ಬಂದಿರುವಿ. ಆದುದರಿಂದ ನಾನು ನಿನಗೆ ಕೊಡುವ ಅಮೃತದಂತಹ ನೇರಳೇ ಹಣ್ಣನ್ನು ತಿನ್ನು. ವೈಶ್ವದೇವಯಜ್ಞ ಪೂರ್ತಿಯಾದಾಗ, ಅಲ್ಲಿಗೆ ಬಂದ ಅತಿಥಿಗೆ ಭೋಜನವಿಟ್ಟರೆ ಅವನು ಶತ್ರುವಿರಲಿ, ಮಿತ್ರನಿರಲಿ, ವಿದ್ವಾಂಸನಿರಲಿ, ಪಾಮರನಿರಲಿ, ನಮಗೆ ಸ್ವರ್ಗಪ್ರಾಪ್ತಿಯಾಗುವಂತೆ ಮಾಡುತ್ತಾನೆ. ವೈಶ್ವದೇವಯಜ್ಞವು ಪೂರ್ತಿಯಾದ ಕೂಡಲೇ ಬಂದ ಅತಿಥಿಯ ಹತ್ತಿರ, 'ನಿನ್ನ ವೇದ ಶಾಖೆ ಯಾವುದು? ಕುಲವಾವುದು? ಎಷ್ಟು ವಿದ್ಯೆ ಕಲಿತಿದ್ದಿ? ನಿನ್ನ ಕುಟುಂಬದವರ ಸಂಗತಿ ಏನು?' ಎಂಬುದಾವುದನ್ನೂ ಕೇಳದೆ, ಅತಿಥಿ ಸತ್ಕಾರಗಳನ್ನು ಮಾಡಿ, ತೃಪ್ತಿಯಾಗಿ ಭೋಜನವಿಡಬೇಕೆಂದು ಮನು ಹೇಳಿದ್ದಾನೆ. ವೈಶ್ವದೇವಯಜ್ಞವು ಮುಗಿದ ಸಮಯದಲ್ಲಿ ಪ್ರಯಾಣದ ಆಯಾಸದಲ್ಲಿ ಬಂದ ಅತಿಥಿಯನ್ನು ಸಂತೋಷಪಡುವ ಹಾಗೆ ಸತ್ಕಾರ ಮಾಡು

ವುದರಿಂದ ಉತ್ತಮ ಲೋಕಗಳು ಕಾದಿರಿಸಲ್ಪಡುತ್ತವೆ. ಬಂದ ಅತಿಥಿಗಳನ್ನು ಹೋಗುವಂತೆ ಹೇಳಿದರೂ, ಹೋಗುವಂತೆ ಮಾಡಿದರೂ ದೇವತೆಗಳೂ ಪಿತೃದೇವತೆಗಳೂ ಕೋಪಗೊಂಡು ವಿಮುಖತೆಯುಳ್ಳರಾಗುತ್ತಾರೆ'' ಎಂದು ಹೇಳಿ ಮಂಗ ಮೊಸಳೆಗೆ ಒಳ್ಳೊಳ್ಳೆಯ ನೇರಳೆ ಹಣ್ಣುಗಳನ್ನು ಕೊಟ್ಟಿತು.

ಮೊಸಳೆ ಅಪೂರ್ವವಾದ ನೇರಳೇ ಹಣ್ಣುಗಳನ್ನು ತಿಂದು ಮಂಗನೊಡನೆ ಗೆಳೆತನ ಮಾಡಿ, ತುಂಬಾ ಮಾತುಕತೆಯಾಡಿ ತನ್ನ ನಿವಾಸಕ್ಕೆ ಹೊರಟುಹೋಯಿತು. ಆಮೇಲೆ ಮಂಗವೂ ಮೊಸಳೆಯೂ ನೇರಳೇ ಮರದ ಬುಡದಲ್ಲಿ ಆಗಾಗ ಕಲೆತು ಶಾಸ್ತ್ರಗಳನ್ನು ಕುರಿತು ಚರ್ಚಿಸಿಕೊಂಡಿದ್ದುವು.

ಒಂದು ದಿನ ಮೊಸಳೆ ಹೊಟ್ಟೆ ತುಂಬಾ ನೇರಳೆ ಹಣ್ಣುಗಳನ್ನು ತಿಂದಿತು. ಇನ್ನೂ ಅಷ್ಟು ಉಳಿದು ಹೋದುವು. ಅವುಗಳನ್ನೆಲ್ಲ ತೆಗೆದುಕೊಂಡು ಅದು ತನ್ನ ನಿವಾಸಕ್ಕೆ ಹೋಗಿ ತನ್ನ ಹೆಂಡತಿಗೆ ಕೊಟ್ಟಿತು. ಹೆಣ್ಣುಮೊಸಳೆ ಅವುಗಳನ್ನು ತಿಂದು ''ಪ್ರಿಯನೇ! ಅಮೃತದಂತಹ ಈ ಹಣ್ಣುಗಳು ನಿನಗೆಲ್ಲಿ ಸಿಕ್ಕಿದುವು?'' ಎಂದು ಆನಂದದಿಂದ ಪ್ರಶ್ನೆ ಮಾಡಿತು.

''ಪ್ರಿಯಳೇ, ನನಗೆ ರಕ್ತಮುಖನೆಂಬ ಮಂಗರಾಯನೊಬ್ಬ ಅಚ್ಚುಮೆಚ್ಚಿನ ಗೆಳೆಯನಾಗಿದ್ದಾನೆ. ಅವನು ನನ್ನ ಮೇಲಿನ ಪ್ರೀತಿಯಿಂದ ದಿನಾ ನನಗೆ ಹಣ್ಣುಗಳನ್ನು ಕೊಡುತ್ತಾನೆ'' ಎಂದಿತು ಮೊಸಳೆ.

''ಆಹಾ! ಇಂತಹ ಮಧುರಾತಿ ಮಧುರ ಹಣ್ಣುಗಳನ್ನು ತಿನ್ನುವ ಆ ಕೋತಿಯ ಗುಂಡಿಗೆಯ ರುಚಿ ಹೇಗಿರಬೇಡ! ಪ್ರಿಯಾ, ನಿನಗೆ ನನ್ನ ಮೇಲೆ ನಿಜವಾಗಿ ಪ್ರೇಮವಿದ್ದರೆ ನೀನು ನನಗಾಗಿ ಆ ಕೋತಿಯ ಗುಂಡಿಗೆಯನ್ನು ತೆಗೆದುಕೊಂಡು ಬಂದುಬಿಡು. ಅದನ್ನು ತಿಂದೆನೆಂದರೆ ನನಗೆ ಜರಾಮರಣಗಳೇ ಬಾರದು. ನಿತ್ಯಯೌವನದಲ್ಲಿ ನಿನ್ನೊಂದಿಗೆ ಸುಖವಾಗಿರಬಹುದು'' ಎಂದಿತು ಮೊಸಳೆಯ ಹೆಂಡತಿ.

''ಪ್ರಿಯಳೇ, ಹಾಗೆ ಹೇಳಬಾರದು. ಆ ಮಂಗರಾಯ ಸಾಧಾರಣ ಕೋತಿಯಲ್ಲ. ಬಹಳ ಜ್ಞಾನಿ. ಅಂತಹ ಮಿತ್ರ ಮಂಗರಾಯನನ್ನು ಹೇಗೆ ಕೊಲ್ಲಲಿ?



ನನ್ನಿಂದಾಗದು. ಆದುದರಿಂದ ನಿನ್ನ ಈ ಕೋರಿಕೆಯನ್ನು ಬಿಟ್ಟುಬಿಡು. ಸತ್ಸಂಗದ ರೀತಿಯಲ್ಲಿ ಏರ್ಪಟ್ಟ ಮೈತ್ರಿ ಸರ್ವೋತ್ತಮವಾದುದು. ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಬಾಂಧವ್ಯವೂ ಅದರನಂತರದ್ದೇ." ಎಂದಿತು ಗಂಡಮೊಸಳೆ.

ಹೆಂಡತಿಮೊಸಳೆ ಕೋಪದಿಂದ, "ನೀನು ಈ ವರೆಗೂ ನನ್ನ ಕೋರಿಕೆಯನ್ನು ನಿರಾಕರಿಸಿದವನಲ್ಲ. ಆದುದರಿಂದ ನಿನಗೆ ಈ ಹಣ್ಣುಗಳನ್ನು ಕೊಡುವ ಕೋತಿ ಹೆಣ್ಣಾಗಿರಬೇಕು. ನೀನು ಅವಳನ್ನು ಪ್ರೇಮಿಸಿರುತ್ತೀ. ಸುಮ್ಮನೆ ಮಂಗರಾಯನೆಂದು ಸುಳ್ಳು ಹೇಳುತ್ತೀಯಾ? ಆದ್ದರಿಂದಲೇ ಇಡೀ ದಿನ ಅವಳೊಂದಿಗೆ ಕಳೆಯುತ್ತೀ! ರಾತ್ರಿಯಲ್ಲಿ ಕೂಡಾ ನೀನು ನನ್ನೊಂದಿಗೆ ಉದಾಸೀನನಾಗಿರುವುದೂ ಅದರಿಂದಲೇ. ನನ್ನ ಹತ್ತಿರ ಒಳ್ಳೆಯ ಮಾತು ಕೂಡಾ ಆಡುವುದಿಲ್ಲ. ನಿನ್ನ ಹೃದಯ ಇನ್ನೊಬ್ಬಳಲ್ಲಿ ಲಗ್ನವಾಗಿದೆ. ಸಂದೇಹವೇ ಇಲ್ಲ!" ಎಂದಿತು.

ಮೊಸಳೆ ತನ್ನ ಹೆಂಡತಿಯ ಪಾದಗಳನ್ನು ಹಿಡಿದು, ಅವಳ ಕೋಪವನ್ನು ಹೋಗಲಾಡಿಸಲು ದೀನ ತನದಿಂದ ಮಾತಾಡುತ್ತ, "ನೀನೆಷ್ಟು ಸೌಂದರ್ಯದ ರಾಶಿಯೋ! ನಿನ್ನಂಥವಳ ಕೋಪವನ್ನು ಹೋಗಲಾಡಿಸಲು, ಮನಸ್ಫೂರ್ತಿಯಾಗಿ ಪ್ರೇಮಿಸುವ ನನ್ನ ಹೊರತು ಬೇರೆ ಯಾರಿದ್ದಾರೆ? ನಾನು ನಿನ್ನ ದಾಸನಲ್ಲವೇನೇ? ನನ್ನ ಮೇಲೆ ಕೋಪ ಮಾಡಬೇಡ. ಸಂದೇಹ ತಾಳಬೇಡ. ನನ್ನ ಬಂಗಾರ!" ಎಂದು ಬೇಡಿಕೊಂಡಿತು.

ಹೆಂಡತಿ ಮೊಸಳೆ ಒಂದೇ ಸಮನೆ ಅಳುತ್ತ, "ಆ ಸ್ತ್ರೀ ಕೋತಿ ನಿನ್ನ ಮನಸ್ಸನ್ನು ಎಳೆದುಕೊಂಡಿದ್ದಾಳೆ. ಅವಳೊಂದಿಗೆ ಕುಲುಕುವ ನಿನಗೆ ನನ್ನ ಹೃದಯದಲ್ಲಿ ಇನ್ನು ಸ್ಥಾನವಿಲ್ಲ, ಛೀ! ದುಷ್ಟನೇ! ನಿನ್ನ ಈ ಬರಡು ಪ್ರಣಾಮ ಪ್ರಮಾಣಗಳೆಲ್ಲಾ ಬೇಡ, ಅದು ನಿನ್ನ ಪ್ರೇಯಸಿಯಲ್ಲದಿದ್ದರೆ ನಾನು ಕೊಲ್ಲಲು ಹೇಳಿದರೆ ಏಕೆ ಕೊಲ್ಲುವುದಿಲ್ಲ? ಆ ಹೆಣ್ಣು ಕೋತಿನ ನೀನು ಪ್ರೇಮಿಸುವಿ ಅಂತ ಇದರಿಂದ ಗೊತ್ತಾಗುವುದಿಲ್ಲವೇ? ಏಕೆ ಇಷ್ಟೆಲ್ಲಾ ಮಾತು? ನೀನು ಅದರ ಗುಂಡಿಗೆಯನ್ನು ತಂದು ನನಗೆ ತಿನ್ನಲು ಕೊಡದಿದ್ದರೆ, ನಾನು ನಿರಾಹಾರವಾಗಿದ್ದು ಪ್ರಾಣ ಬಿಡುತ್ತೇನೆ" ಎಂದು ಅತ್ತಿತು.

ತನ್ನ ಹೆಂಡತಿಯ ತೀರ್ಮಾನವನ್ನು ಕೇಳಿ ಗಂಡ ಮೊಸಳೆ ತನ್ನಲ್ಲಿ, "ವಜ್ರವೆಂಬ ಅಂಟೂ, ಮೂರ್ಖನೂ, ಹೆಂಗುಸೂ, ಏಡಿಯೂ, ಮೀನೂ, ಕುಡುಕನೂ, ನೀಲಿ ಮದ್ದೂ ಹಿಡಿದುಕೊಂಡರೆ ಬಿಡಲಾರವೆಂದು ಪ್ರಾಜ್ಞರು ಹೇಳುತ್ತಾರೆ. ಈಗ ನಾನೇನು ಮಾಡಲಿ? ಗೆಳೆಯ ಮಂಗನನ್ನು ಕೊಲ್ಲುವುದು ಹೇಗೆ?" ಎಂದುಕೊಂಡಿತು.



# ೧೯೯. ಮೊತ್ತಮೊದಲ ರೈತರು

ಮಾನವನು ಪ್ರಪಂಚದಲ್ಲಿ ಮೊತ್ತಮೊದಲು ನಾಗರಿಕತೆಯನ್ನು ನಿರ್ಮಿಸಿದ್ದು ಟಿಗ್ರಿಸ್–ಯುಫ್ರಾಟಿಸ್ ನದಿಗಳ ಮಧ್ಯದಲ್ಲಿರುವ "ಮೆಸೊಪೊಟಾಮಿಯಾ"ದಲ್ಲಿ. ಅದೇ ಸುಮೇರಿಯನ್ ನಾಗರಿಕತೆ. ೮, ೯ ಸಾವಿರ ವರ್ಷಗಳ ಕೆಳಗೆ ಈಗಿನ ಇರಾಕ್ ಪ್ರಾಂತಕ್ಕೆ ಸೇರಿದ ಸಂಚಾರ ಜೀವಿಗಳು ವ್ಯವಸಾಯ ಪ್ರಾರಂಭಿಸಿ, ನಗರಗಳನ್ನು ನಿರ್ಮಿಸಿ ಸುಮೇರಿಯನ್ ನಾಗರಿಕತೆಗೆ ಬುನಾದಿ ಹಾಕಿದರು. ಚಿತ್ರದಲ್ಲಿರುವುದು ಹಸ್ಸುನಾ ನಗರ ಶಿಥಿಲಗಳು. ಇವುಗಳನ್ನು ನಿರ್ಮಿಸಿದವರಿಗೆ ಗೃಹ ನಿರ್ಮಾಣವೂ ವೃತ್ತಿ ವಿದ್ಯೆಗಳೂ ಗೊತ್ತಿದ್ದುವು. ಇಲ್ಲಿ ಚಿಕಮುಕಿ ಕಲ್ಲು, ಕೊಡಲಿ, ಕತ್ತಿಗಳು ದೊರಕಿವೆ.





# ಅರ್ಥವಿಲ್ಲದ ಪರೀಕ್ಷೆ

**ಬೇ**ತಾಳದ ಬೆನ್ನುಬಿಡದ ತ್ರಿವಿಕ್ರಮನು ಅದರ ಮರದ ಬಳಿಗೆ ತಿರುಗಿಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ಹೊತ್ತುಕೊಂಡು ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ತ್ರಿವಿಕ್ರಮ ಮಹಾರಾಜನೇ, ನಿನಗಿದೊಂದು ದೊಡ್ಡ ಪರೀಕ್ಷೆಯಾಯಿತಲ್ಲ? ಯಾರು ನಿನ್ನನ್ನು ಹೀಗೆ ಪರೀಕ್ಷೆಗೆ ಒಳಪಡಿಸಿದರೋ ನಾಬೇರೆ ಕಾಣೆ. ಕೆಲವರು ಸುಮ್ಮಸುಮ್ಮನೆ ಅರ್ಥವಿಲ್ಲದ ಪರೀಕ್ಷೆಗಳನ್ನು ಇಟ್ಟು ಬೇಡದ ಕಷ್ಟಗಳನ್ನು ಉಂಟು ಮಾಡಿಸುತ್ತಾರೆ. ಅದರಿಂದ ಯಾರಿಗೂ ಯಾವ ಪ್ರಯೋಜನವೂ ಇಲ್ಲವೆಂಬುದಕ್ಕೆ ಕಾಂಚನವರ್ಮನ ಮಗಳು ರತ್ನಪ್ರಭೆಯ ಕಥೆಯೇ ಸಾಕ್ಷಿ. ದಾರಿಯ ಶ್ರಮ ತಿಳಿಯದಂತೆ ನಿನಗೆ ಆ ಕಥೆ ಹೇಳುತ್ತೇನೆ." ಎಂದು ಹೀಗೆ ಕಥೆಯನ್ನು ಹೇಳತೊಡಗಿತು:

ಪೂರ್ವಕಾಲದಲ್ಲಿ ಸಿಂಹಪುರರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಂಚನವರ್ಮನಿಗೆ ರತ್ನಪ್ರಭೆ ಎಂಬ ಮಗಳಿದ್ದಳು. ವಿದ್ಯಾಬುದ್ಧಿಗಳಿಂದ ಪ್ರೌಢೆಯಾಗಿ, ಸುಂದರಯಾಗಿರುವ ಅವಳಿಗೆ ಪ್ರಾಪ್ತವಯಸ್ಸು

## ಬೇತಾಳ ಕಥೆಗಳು

ಬಂದಿತು. ಇನ್ನು ಮಗಳಿಗೆ ಮದುವೆ ಮಾಡಬೇಕೆಂದು ಆಲೋಚನೆ ಮಾಡುವ ಸಮಯಕ್ಕೆ ಕಾಂಚನವರ್ಮನು ಆಕಸ್ಮಿಕವಾಗಿ ಸತ್ತುಹೋದನು. ರತ್ನಪ್ರಭೆಯೇ ಸಿಂಹಾಸನವೇರಿ ರಾಜ್ಯಪಾಲನೆ ನೋಡಿಕೊಳ್ಳತೊಡಗಿದಳು. ಪ್ರಜಾಪರಿಪಾಲನೆಯಲ್ಲಿ ಅವಳು ತಂದೆಗೆ ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ನಡೆಯಿಸುತ್ತಿದ್ದಳು. ಅದನ್ನು ನೋಡಿ ಎಲ್ಲರಿಗೂ ಸಂತೋಷದೊಂದಿಗೆ ಆಶ್ಚರ್ಯವೂ ಆಯಿತು. ಅವಳಿಗೆ ಒಳ್ಳೆಯ ಹೆಸರೂ ಖ್ಯಾತಿಯೂ ಬರುತ್ತಿತ್ತು. ಅವಳು ಪ್ರಜೆಗಳ ಸುಖದುಃಖಗಳನ್ನು ಸಾವಿರ ಕಣ್ಣುಗಳಿಂದ ನೋಡುತ್ತ, ತಪ್ಪುಗಳನ್ನು ಕೂಡಲೇ ತಿದ್ದುತ್ತ, ಪ್ರಜೆಗಳಿಂದ ವಸೂಲು ಮಾಡುವ ತೆರಿಗೆಯ ಹಣವನ್ನು ಅವರ ಹಿತಕ್ಕಾಗಿಯೇ ಖರ್ಚು ಮಾಡಿಸುತ್ತಿದ್ದಳು.

ಸಿಂಹಪುರಿಯ ಪಕ್ಕದಲ್ಲಿರುವ ವಿಜಯಪುರಿಯ ರಾಜನಾದ ರವಿವರ್ಮನು, ರತ್ನಪ್ರಭೆಯ ಖ್ಯಾತಿಯನ್ನು ಕೇಳಿ ಅವಳನ್ನು ಮದುವೆಯಾಗಬೇಕೆಂದು ಬಯಸಿದನು. ಹಾಗೆ ಮಾಡಿದರೆ ಎರಡು ರಾಜ್ಯಗಳೂ ತನ್ನದಾಗುವುದು ಮಾತ್ರವಲ್ಲದೆ, ಪರಿಪಾಲನೆಯಲ್ಲಿ ಸುದಕ್ಷಳಾದ ರತ್ನಪ್ರಭೆಯ ಸಹಾಯದಿಂದ ತಾನು ಕೂಡಾ ದೊಡ್ಡ ಖ್ಯಾತಿ ಸಂಪಾದಿಸಬಹುದೆಂದು ಅವನಿಗೆ ತೋರಿತು.

ಅವನು ಈ ವಿಷಯ ಮಾತಾಡಲು ದೂತರನ್ನು ಕಳುಹಿಸುವುದಕ್ಕೆ ಬದಲಾಗಿ, ತಾನೇ ಸ್ವಯಂ ಹೊರಟು ರತ್ನಪ್ರಭೆಯ ಬಳಿಗೆ ಹೋಗಿ, ತನಗಿರುವ ಕೋರಿಕೆಯನ್ನು ಅವಳೊಂದಿಗೆ ಹೇಳಿದನು.

ರತ್ನಪ್ರಭೆ ಅವನು ಹೇಳುವುದನ್ನೆಲ್ಲಾ ಸಾವಧಾನವಾಗಿ ಕೇಳಿ, "ನೀವು ನನ್ನನ್ನು ಮದುವೆಯಾಗಲು ಬಯಸಿರುವುದು ತಿಳಿದು ಸಂತೋಷವಾಯಿತು. ಅದು ನನ್ನ ಭಾಗ್ಯವೆಂದೂ ತಿಳಿಯುತ್ತೇನೆ. ಆದರೆ ನನ್ನನ್ನು ಮದುವೆ ಮಾಡಿಕೊಳ್ಳಬೇಕೆಂದಿರುವವರಿಗೆ ನಾನೊಂದು ಸಣ್ಣ ಪರೀಕ್ಷೆ ಇಡಬೇಕೆಂದಿದ್ದೇನೆ. ಅದು ನಿಮಗೆ ಒಪ್ಪಿಗೆಯಾಗುವುದೋ ಇಲ್ಲವೋ? ಹೇಳಲೇ?" ಎಂದಳು.



"ಖಂಡಿತ ಒಪ್ಪುತ್ತೇನೆ. ಹೇಳಿಬಿಡು. ಪರೀಕ್ಷೆ ಏನೆಂದು ಗೊತ್ತಾದರೆ ಗೆಲ್ಲಲಿಕ್ಕೆ ಪ್ರಯತ್ನಮಾಡುತ್ತೇನೆ" ಎಂದ ರವಿವರ್ಮ.

"ಮತ್ತೇನಿಲ್ಲ. ಹಿಮಾಲಯಾ ಪ್ರಾಂತದಲ್ಲೆಲ್ಲೋ ಶಂಖವೃಕ್ಷವೆಂಬ ಮರವಿದೆಯಂತೆ. ಅದರ ಹೂಗಳು ಎಂದಿಗೂ ಬಾಡದಂಥವಂತೆ. ಆ ಹೂಗಳನ್ನು ತರಬೇಕು. ಇದೇ ಪರೀಕ್ಷೆ" ಎಂದಳು ರತ್ನಪ್ರಭೆ.

"ಇಷ್ಟೇತಾನೇ ? ತಂದರಾಯಿತು" ಎಂದು ಹೇಳಿ ರವಿವರ್ಮ ಹೊರಟನು. ಅವನು ಅತ್ಯುತ್ಸಾಹದಿಂದ ಕುದುರೆಯ ಮೇಲೇರಿಕೊಂಡು ವೇಗವಾಗಿ ಸಾಗುತ್ತ ಕೆಲವೇ ದಿನಗಳಲ್ಲಿ ಹಿಮಾಲಯಾ ಪ್ರಾಂತವನ್ನು ತಲಪಿದನು. ಆದರೆ ಶಂಖವೃಕ್ಷವೆಲ್ಲಿದೆ ಎಂದು ಯಾರನ್ನು ಕೇಳಿದರೂ ಗೊತ್ತಾಗಲಿಲ್ಲ. ಎಷ್ಟು ನೂರು ಮೈಲುಗಳನ್ನು ತಿರುಗಿದರೂ ಆ ಮರದ ಗುರುತು ಹೇಳುವವರೊಬ್ಬರೂ ಇರಲಿಲ್ಲ. ಅಂತಹ ಮರವು ಇಂತಹ ಪ್ರಾಂತದಲ್ಲಿ ಹುಡುಕಿದರೆ ಸಿಕ್ಕೀತೆಂದು ಹೇಳುವವರಾರೂ ಇರಲಿಲ್ಲ. ಸಾವಿರಾರು ಮೈಲು ವಿಸ್ತಾರವಾದ ಹಿಮಾಲಯಾ ಪ್ರಾಂತದಲ್ಲಿ ರವಿವರ್ಮನು ಅನೇಕ ತಿಂಗಳುಗಳವರೆಗೆ ತಿರುಗಿ, ಶಂಖವೃಕ್ಷವೆಂಬುದು ಇಲ್ಲವೇ ಇಲ್ಲವೇನೋ ಎಂಬ ಅನುಮಾನಕ್ಕೆ ಬಿದ್ದು, ಸ್ವದೇಶಕ್ಕೆ ಹಿಂದಿರುಗಿದನು.

ಅವನು ತನ್ನ ದೇಶದ ಸಮೀಪಕ್ಕೆ ಬರುವಾಗ, ತಾನು ಇಲ್ಲದ ಸಮಯದಲ್ಲಿ ತನ್ನ ರಾಜ್ಯವನ್ನು ಬೇರೊಬ್ಬರಾಜನು ಆಕ್ರಮಿಸಿಕೊಂಡಿರುವ ಸಂಗತಿ ಗೊತ್ತಾಯಿತು. ತನ್ನ ರಾಜ್ಯಕ್ಕೆ ಹೊಕ್ಕಕೂಡಲೇ ತಾನು ಬಂದಿಯಾಗುವೆನೆಂದು ತಿಳಿದು, ಅವನು ರತ್ನಪ್ರಭೆಯ ಬಳಿಗೇ ಹೋದನು. ಅವಳೊಂದಿಗೆ ತಾನು ಪಟ್ಟಶ್ರಮವನ್ನು ತಿಳಿಸಿ, "ಈಗ ಉಭಯಭ್ರಷ್ಟನಾದೆನಲ್ಲ ?" ಎಂದು ಗೋಗರೆದನು.

ರತ್ನಪ್ರಭೆ ಅವನ ಮೇಲೆ ಸಹಾನುಭೂತಿಯನ್ನು ತೋರ್ಪಡಿಸುತ್ತ, "ನೀವು ಹೊರಟುಹೋದ ಮೇಲೆ ಕಾಲನೇಮಿ ಎಂಬ ನಿಮ್ಮ ದೇಶದ ಉತ್ತರ ದಿಕ್ಕಿನ ರಾಜನು ನಿಮ್ಮ ರಾಜ್ಯವನ್ನು ಅಪಹರಿಸಿದ



ನೆಂಬ ಸಂಗತಿ ಗೊತ್ತಾಯಿತು. ಅದಕ್ಕಾಗಿ ಚಿಂತಿಸ ಬೇಡಿ. ನಾನು ನನ್ನ ಸೈನ್ಯದಿಂದ ನಿಮ್ಮ ರಾಜ್ಯ ವನ್ನು ನಿಮಗೆ ಕೊಡಿಸಿಬಿಡುತ್ತೇನೆ" ಎಂದು ಸಮಾ ಧಾನ ಹೇಳಿದಳು.

ಅವಳು ಹೇಳಿದ ಹಾಗೆಯೇ ಮಾಡಿಯೂ ಬಿಟ್ಟಳು. ಅವಳ ಸೇನೆಯ ದಾಳಿಯಿಂದ ಕಾಲ ನೇಮಿ ಸಿಂಹಪುರದಿಂದ ಓಡಿಹೋದನು. ಅವಳು ರವಿವರ್ಮನನ್ನು ಅವನ ಸಿಂಹಾಸನದ ಮೇಲೆ ಕೂಡಿಸಿ, "ಇನ್ನಾದರೂ ನೀವು ನಿಮ್ಮ ರಾಜ್ಯ ವನ್ನು ಎಚ್ಚರಿಕೆಯಿಂದ ಪ್ರಜಾರಂಜಕವಾಗಿ ಪಾಲಿಸಿ ಕೊಂಡಿರಿ" ಎಂದು ಹೇಳಿ ತನ್ನ ದೇಶಕ್ಕೆ ಹೊರಟು ಹೋದಳು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ರತ್ನಪ್ರಭೆ ರವಿವರ್ಮನಿಗೆ ಇಟ್ಟ ಪರೀಕ್ಷೆಗೆ ಏನಾದರೂ ಅರ್ಥವಿದೆಯೇ? ಅವಳು ಅವನ ಮೇಲೆ ಸಹಾನುಭೂತಿ ತೋರಿಸಿ ಕಳೆದುಹೋದ ಅವನ ರಾಜ್ಯವನ್ನು ಗೆಲ್ಲಿಸಿಕೊಟ್ಟಾಗ ಅವನನ್ನು ಮದುವೆ ಕೂಡಾ ಮಾಡಿಕೊಳ್ಳಬಹುದಿತ್ತಷ್ಟೆ? ಅವಳೇಕೆ ಹಾಗೆ ಮಾಡಲಿಲ್ಲ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದಿದ್ದರೆ ನಿನ್ನ ತಲೆ ಒಡೆದು ಹೋಳಾಗುತ್ತದೆ!" ಎಂದು ಹೇಳಿ ಸುಮ್ಮ ನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ರತ್ನಪ್ರಭೆ ರಾಜನೀತಿಯಲ್ಲಿ ಕರೆಕಂಡವಳು. ರತ್ನಪ್ರಭೆ ತನ್ನನ್ನು ಮದುವೆಯಾಗಲು ಬಯಸಿದಾಗಲೇ ಅವನಿಗಿರುವ ರಾಜ್ಯಾಕಾಂಕ್ಷೆ ಅವಳಿಗೆ ಗೊತ್ತಾಗಿತ್ತು. ಅವನಿಗೆ ರಾಜ್ಯಪಾಲನೆಯ ದಕ್ಷತೆ ಇದೆಯೋ ಇಲ್ಲವೋ ಎಂಬುದನ್ನು ನೋಡಲಿಕ್ಕಾಗಿಯೇ ಅವಳು ಅವನಿಗೆ ಪರೀಕ್ಷೆ ಎಂಬ ನೆವನ ಒಡ್ಡಿದಳು. ಪರಿಪಾಲನೆಯಲ್ಲಿ ದಕ್ಷನಾಗಿದ್ದರೆ, ಶಂಖವೃಕ್ಷದ ವಿವರಗಳನ್ನು ಕೇಳು ತ್ತಿದ್ದನು. ತನ್ನ ರಾಜ್ಯದ ರಕ್ಷಣೆಗೆ ಏರ್ಪಾಡು ಮಾಡಿಯೇ ಹೊರಡುತ್ತಿದ್ದನು. ಹಾಗೆ ಕೇಳುತ್ತಿದ್ದರೆ ಈ ಪರೀಕ್ಷೆಯೇ ನಿರರ್ಥಕವೆಂತಲೂ ತಿಳಿದುಕೊಳ್ಳು ತ್ತಿದ್ದನು. ಅದಾವುದೂ ಕೇಳದೆ ಮಾಡದೆ ಎಲ್ಲಿಯೂ ಇಲ್ಲದ ವೃಕ್ಷವನ್ನು ಹುಡುಕುತ್ತ ವೃಥಾ ತಿರುಗಿ ತನ್ನ ರಾಜ್ಯವನ್ನು ಕಳೆದುಕೊಂಡನು. ಹೀಗೆ ಅವನ ರಾಜ್ಯವು ಕೈಬಿಟ್ಟುಹೋಗಲು ತಾನೇ ಕಾರಣನಾದು ದರಿಂದಲೇ ಅವಳು, ಹೋದರಾಜ್ಯವು ಅವನಿಗೆ ಸಿಗುವ ಹಾಗೆ ಮಾಡಿದಳು. ಅಷ್ಟೇ ಹೊರತು ಅವನು ತನ್ನ ಗಂಡನಾಗಲಿಕ್ಕೆ ಅರ್ಹನೆಂಬ ಭಾವನೆ ಅವಳಿಗಿರಲಿಲ್ಲ. ಅದು ಅವನಿಗೂ ಗೊತ್ತಾಯಿತು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ಫಲಿಸಿದ ಯುಕ್ತಿ

ಒಂದು ಗ್ರಾಮದಲ್ಲಿ ರಾಜಮ್ಮ ಎಂಬವಳೂ, ಸೀತಮ್ಮ ಎಂಬವಳೂ ಹೆಚ್ಚು ಕಡಿಮೆ ಒಂದೇ ವಯಸ್ಸಿನ ಹೆಂಗುಸರು. ಇಬ್ಬರೂ ಗಂಡನನ್ನು ಕಳೆದುಕೊಂಡವರು. ರಾಜಮ್ಮನಿಗೆ ರಂಗನೆಂಬ ಮಗನೂ, ಸೀತಮ್ಮನಿಗೆ ಜಾನಕಿ ಎಂಬ ಮಗಳೂ ಇದ್ದರು. ಇಬ್ಬರ ಮನೆಗಳೂ ಹತ್ತಿರ ಹತ್ತಿರವೇ ಇದ್ದುದರಿಂದ, ಮಕ್ಕಳು ಒಟ್ಟೊಟ್ಟಿಗೆ ಆಡಿಕೊಂಡೇ ಬೆಳೆಯುತ್ತಿದ್ದರು. ರಾಜಮ್ಮನ ಗಂಡನೂ ಸೀತಮ್ಮನ ಗಂಡನೂ ತಮ್ಮ ಮಕ್ಕಳು ದೊಡ್ಡವರಾದ ಮೇಲೆ ಇಬ್ಬರನ್ನೂ ಮದುವೆಯಿಂದ ಸೇರಿಸಿ ಬಿಡಬೇಕೆಂದು ಮಾತಾಡಿಕೊಂಡಿದ್ದರು. ಆದರೆ ಆ ಮಕ್ಕಳು ಚಿಕ್ಕ ಪ್ರಾಯದಲ್ಲಿರುವಾಗಲೇ ಅವರಿಬ್ಬರೂ ಒಂದು ದೋಣಿಯ ಅವಘಡದಲ್ಲಿ ಅಸು ತೊರೆದಿದ್ದರು.

ಮುಂದೆ ಕ್ರಮೇಣ ಮಕ್ಕಳು ಪ್ರಾಯಕ್ಕೆ ಬರುವಾಗ ರಾಜಮ್ಮನ ಬುದ್ಧಿಯೂ ಸೀತಮ್ಮನ ಬುದ್ಧಿಯೂ ಬದಲಾವಣೆಗೊಂಡಿತು. ತನ್ನ ಜಾಣ ಮಗನಿಗೆ ಒಳ್ಳೆಯ ವರದಕ್ಷಿಣೆ ತೆಗೆದುಕೊಂಡು ಮದುವೆ ಮಾಡಬೇಕೆಂದು ರಾಜಮ್ಮ ಆಶಿಸಿದಳು. ತನ್ನ ಮಗಳನ್ನು ಪಟ್ಟಣದ ಶ್ರೀಮಂತನಿಗೆ ಕೊಡಬೇಕೆಂದು ಸೀತಮ್ಮ ಅಂದುಕೊಂಡಿದ್ದಳು. ಆದರೇನಾಯಿತು? ರಂಗನೂ ಜಾನಕಿಯೂ ಚಿಕ್ಕತನದಿಂದಲೂ ತಾವು ಗಂಡ ಹೆಂಡಿರೆಂದೇ ಅಂದುಕೊಳ್ಳುತ್ತ ಬಂದಿದ್ದರು. ತಮ್ಮ ತಾಯಂದಿರು ತಮಗೆ ಬೇರೆ ಸಂಬಂಧ ನೋಡುವ ಸಂಗತಿ ಇಬ್ಬರಿಗೂ ಗೊತ್ತಾಯಿತು. ಅದನ್ನು ಭಗ್ನಪಡಿಸಲು ಇಬ್ಬರೂ ಬಹಳ ಪ್ರಯತ್ನ ಮಾಡಲು ತೊಡಗಿದರು.

ಒಂದುಸಾರಿ ಗಂಗಾರಾಮನೆಂಬ ದೊಡ್ಡ ಆಸ್ತಿವಂತನು ತನ್ನ ಮಗಳಿಗಾಗಿ ರಂಗನನ್ನು ನೋಡೋಣವೆಂದು ರಾಜಮ್ಮನ ಮನೆಗೆ ಬಂದನು.

ರಾಜಮ್ಮ ಗಂಗಾರಾಮನಿಗೆ ಸಕಲ ಮರ್ಯಾದೆಗಳನ್ನೂ ಮಾಡಿದಳು. ಆ ಸಮಯದಲ್ಲಿ ರಂಗ ಮನೆಯಲ್ಲಿರಲಿಲ್ಲ, ಗದ್ದೆಯಲ್ಲಿದ್ದನು. ತನ್ನನ್ನು ನೋಡಲಿಕ್ಕೆ ಯಾರೋ ದೊಡ್ಡ ಮನುಷ್ಯರು ಬಂದಿರುವರೆಂಬ ಸಂಗತಿ ತಿಳಿದು ರಂಗ ಬರಿಗೈಯಲ್ಲಿ ಮನೆಗೆ ಹಿಂದಿರುಗಿಬಂದನು. ಅದನ್ನು ನೋಡಿ ರಾಜಮ್ಮ "ಕಟ್ಟಿಗೆ ಒಡೆಯಲು ಹೋದೆಯಲ್ಲಾ? ಕೊಡಲಿ ಎಲ್ಲಿದೆ?" ಎಂದು ಕೇಳಿದಳು. "ಕಡಿಯುವ ಮರದ ಹತ್ತಿರವೇ ಇದೆ" ಎಂದ ರಂಗ.

ಪಿ. ಖಾದರ್‌ವಲೀ ಖಾನ್

"ಕಡಿಯುವ ಮರ ಎಲ್ಲಿದೆ ?" ಎಂದು ರಾಜಮ್ಮ ಕೇಳಿದಳು. "ಕೊಡಲಿ ಇಟ್ಟಿರುವಲ್ಲೇ ಇದೆ ಅಮ್ಮಾ" ಎಂದ ರಂಗ.

ಅವನನ್ನು ನೋಡಲು ಬಂದ ಗಂಗಾ ರಾಮನಿಗೆ ರಂಗನ ಮಾತು ಕೇಳಿ ಸುಸ್ತು ಬಡೆಯಿತು. ರಾಜಮ್ಮ ಮಾತು ಬದಲಾಯಿಸಿ, "ಇಷ್ಟು ಹೊತ್ತೂ ಏನು ಮಾಡುತ್ತಾ ಇದ್ದೆಯೋ ?" ಎಂದು ಕೇಳಿದಳು.

"ನೀನು ಸುದ್ದಿ ಕಳಿಸುವಾಗ ನಾನು ತೆಂಗಿನ ಮರದ ಮೇಲಿದ್ದೆನಮ್ಮಾ. ಇಳಿದು ಬರುವಾಗ ಸ್ವಲ್ಪ ತಡವಾಯಿತು." ಎಂದ ರಂಗ.

"ತೆಂಗಿನ ಮರ ಏಕೆ ಹತ್ತಿದಿ ?" ಎಂದು ರಾಜಮ್ಮ ಆಶ್ಚರ್ಯದಿಂದ ಕೇಳಿದಳು. "ಕರುವಿಗೆ ಹುಲ್ಲು ತಾ ಅಂದೆಯಲ್ಲಾ, ಅದಕ್ಕೇ" ಎಂದ ರಂಗ,

"ಮರದ ಮೇಲೆ ಹುಲ್ಲಿರುತ್ತೇನೋ ?" ಎಂದು ತಾಯಿ ಆಶ್ಚರ್ಯದಿಂದ ಕೇಳಿದಳು. "ಇಲ್ಲಮ್ಮ. ಅದಕ್ಕೇ ಬರಿ ಗೈಲಿ ಇಳಿದು ಬಂದುಬಿಟ್ಟೆ." ಎಂದ ಅವಳ ಮಗ. ಇದನ್ನೆಲ್ಲ ಕೇಳಿ ಗಂಗಾರಾಮ ಹೋಗಿ ಬರುತ್ತೇನೆಂದು ಹೇಳಿ ಜಾರಿಕೊಂಡನು. ರಾಜಮ್ಮ ತನ್ನ ಮಗನಿಗೆ ನಾನಾ ಬೈಗುಳು ಚೆಲ್ಲುತ್ತ, "ನಿನ್ನ ಮುಖಕ್ಕೆ ಒಳ್ಳೇ ಸಂಬಂಧದ ಅದೃಷ್ಟ ಇಲ್ಲ !" ಎಂದಳು. "ನನಗೆ ಜಾನಕಿಗಿಂತ ಒಳ್ಳೇ ಸಂಬಂಧ ಎಲ್ಲಿಯೂ ಇಲ್ಲಮ್ಮ" ಎಂದ ರಂಗ.

ಜಾನಕಿ ಕೂಡಾ ತನ್ನನ್ನು ನೋಡಲು ಬಂದವರ ಮುಂದೆ ಅದೇ ರೀತಿಯಾಗಿ ಪ್ರವರ್ತಿಸಿದಳು. ಅವಳನ್ನು ನೋಡಬಂದವರಲ್ಲಿ ಒಬ್ಬಳು "ಏನಮ್ಮಾ, ಬೇಳೆಗೆ ರುಚಿ ಬರಬೇಕಾದರೆ ಏನು ಮಾಡಬೇಕು ?" ಎಂದು ಕೇಳಿದಳು.

"ಬೆಂಕೀ ಮೇಲೆ ಬೇಳೆ ಹಾಕಿ ಉರಿಸಿಬಿಟ್ಟರೆ ತುಂಬ ರುಚಿ ಯಾಗಿರುತ್ತೆ" ಎಂದಳು ಜಾನಕಿ.

ಪ್ರಶ್ನೆ ಕೇಳಿದವಳು ಆಶ್ಚರ್ಯದಿಂದ ಬಾಯಿ ತೆರೆದುಕೊಂಡಳು. ಆಗ ಅಂಗಳದಲ್ಲಿದ್ದ ಹೇಂಟೆ ಯೊಂದು ಮನೆಯೊಳಗೆ ಬಂತು. ಜಾನಕಿ ಕಸಪೊರಕೆ ಯಿಂದ ಅದನ್ನು ಹೊಡೆದಳು. "ಇದೇನೆ ? ನಮ್ಮ ಹೇಂಟೇನ ಹಾಗೆ ಹೊಡೆಯುತ್ತಿಯಲ್ಲಾ ?" ಎಂದು ತಾಯಿ ಹೇಳಲು, "ಅತ್ತೆ ಒಳಗೆ ಬಂದ್ರು ಅಂದು ಕೊಂಡೆನಮ್ಮ !" ಎಂದಳು ಜಾನಕಿ ಪಶ್ಚಾತ್ತಾಪ ಪಡುವವಳಂತೆ.

ಈ ಸಂಗತಿ ಗೊತ್ತಾದ ಮೇಲೆ ಹುಡುಗಿ ನೋಡಲು ಬರುವವರು ಕಡಿಮೆಯಾದರು. ತಾವು ಹೇಳುವ ಅಭಿಪ್ರಾಯಕ್ಕೆ ತಮ್ಮ ಮಕ್ಕಳು ಒಡಂಬಡುವುದಿಲ್ಲವೆಂದು ಸೀತಮ್ಮನಿಗೂ ರಾಜಮ್ಮ ನಿಗೂ ಗೊತ್ತಾಯಿತು. ಆ ಮೇಲೆ ಇಬ್ಬರೂ ಸುಮುಖರಾಗಿ, ತಮ್ಮ ಗಂಡಂದಿರು ಅಂದುಕೊಂಡ ಹಾಗೆಯೇ ಮಕ್ಕಳಿಗೆ ಮದುವೆ ಮಾಡಿದರು.



# ಧರ್ಮ

ಒಬ್ಬ ಜಮೀನ್ದಾರನು ದಾನಧರ್ಮ ಮಾಡುವುದರಲ್ಲಿ ತುಂಬ ಹೆಸರಾಗಿದ್ದನು. ಒಂದು ದಿನ ಆ ಜಮೀನ್ದಾರನು ತನ್ನ ಅಂತರಂಗಿಕ ಕಾರ್ಯದರ್ಶಿಯೊಂದಿಗೆ ದಾರಿಯಲ್ಲಿ ಹೋಗುತ್ತಿದ್ದನು. ಆಗ ಒಬ್ಬ ಯಾಚಕನು ಅವರ ಹಿಂದೆ ಬಿದ್ದು, "ಧರ್ಮ ಪ್ರಭುಗಳು ! ಚಳಿಗೆ ನಡುಗುತ್ತಿದ್ದೇನೆ ಸ್ವಾಮಿ ! ಏನಾದರೂ ಬಟ್ಟೆ ಕೊಡಿಸಿರಯ್ಯಾ !" ಎಂದು ಬೇಡಿದನು.

ಜಮೀನ್ದಾರನ ಕಾರ್ಯದರ್ಶಿ ಆ ಸಮಯದಲ್ಲಿ ತನ್ನ ಬಾವಯ್ಯನಿಗೆ ಜಮೀನ್ದಾರನ ಕಛೇರಿಯಲ್ಲಿ ಒಂದು ಉದ್ಯೋಗ ಕೊಡಿಸಬೇಕೆಂದು ಕೇಳುತ್ತಿದ್ದನು.

ಅವನು ಭಿಕ್ಷುಕನೊಂದಿಗೆ, "ಸುಮ್ಮನೆ ಬೆನ್ನು ಬೀಳಬೇಡ. ನನ್ನ ಮನೆಗೆ ಬಾ. ಕೊಡುತ್ತೇನೆ" ಎಂದನು ಜಮೀನ್ದಾರನ ಭಾರ ತಾನು ಹೊರವವನ ಹಾಗೆ.

ಆ ಯಾಚಕನು ಆ ಕಾರ್ಯದರ್ಶಿಯ ಮನೆಯ ಮುಂದೆ ಅನೇಕಸಾರಿ ತಿರುಗಿದ ಮೇಲೆ, ಅವನು ಹರಿದುಹೋದ ಹಳೆಯ ಅಂಗಿಯನ್ನು ಯಾಚಕನ ಮುಖಕ್ಕೆ ಬಡಿದು, "ಇನ್ನು ಹೋಗು !" ಎಂದನು. ಆ ಅಂಗಿಯ ಮೇಲೆ "ಜಮೀನ್ದಾರ್ರ ಧರ್ಮ" ಎಂದು ಬರೆದು ಅದನ್ನು ತೊಟ್ಟುಕೊಂಡು ಬೀದಿಬೀದಿ ತಿರುಗುತ್ತಿದ್ದನು ಆ ಯಾಚಕ.

ಒಂದು ದಿನ ಜಮೀನ್ದಾರ ಅದನ್ನು ನೋಡಿ, "ಈ ಹರಕು ಅಂಗಿ ನಾನು ನಿನಗೆ ಕೊಟ್ಟಿದ್ದು ನೆನಪಿಲ್ಲವಲ್ಲಾ ?" ಎಂದು ಕೇಳಿದನು.

"ತಮ್ಮ ಪರವಾಗಿ ತಮ್ಮ ಕಾರ್ಯದರ್ಶಿಗಳು ದಯ ಮಾಡಿದರು" ಎಂದ ಯಾಚಕ,

ಜಮೀನ್ದಾರ ಅವನಿಗೆ ಒಳ್ಳೆಯ ಅಂಗಿ ಬಟ್ಟೆಕೊಟ್ಟು ಕಳುಹಿಸಿದನು.





# ಬಂಗಾರದ ಮಾಮ

ರತ್ನಪುರದ ರಾಜನಾಗಿದ್ದ ಭಾನುಗುಪ್ತನು ತೀರಿ ಹೋದ ಮೇಲೆ ಅವನ ಮಗನಾದ ಸೋಮಗುಪ್ತನು ರಾಜನಾಗಿ ಸಿಂಹಾಸನವೇರಿದನು. ರತ್ನಪುರವು ವ್ಯಾಪಾರಕ್ಕೆ ಮುಖ್ಯವಾಗಿ, ತುಂಬಿದ ಸಂಪನ್ನ ನಗರವೆಂದು ಹೆಸರು ಪಡೆದಿತ್ತು. ಅದಕ್ಕೆ ತಕ್ಕಂತೆ ಭಾನುಗುಪ್ತನು ಅರ್ಥಶಾಸ್ತ್ರ ನಿಪುಣನಾದುದರಿಂದ ಅವನ ಆಳಿಕೆಯಲ್ಲಿ ದೇಶವು ಆರ್ಥಿಕವಾಗಿ ತುಂಬಾ ಅಭಿವೃದ್ಧಿ ಹೊಂದಿತ್ತು. ಅವನ ಮಂತ್ರಿಗಳು ಕೂಡಾ ಒಳ್ಳೆಯ ಬುದ್ಧಿವಂತರಾಗಿ ಕಾಲಕ್ಕೆ ತಕ್ಕ ಸಲಹೆಯನ್ನು ಕೊಡುತ್ತ ಪರಿಪಾಲನೆಯ ತೂಕ ತಪ್ಪದಂತೆ ನೋಡಿಕೊಳ್ಳುತ್ತಿದ್ದರು.

ತಂದೆಯ ಅನಂತರ ರಾಜ್ಯಕ್ಕೆ ಬಂದ ಸೋಮಗುಪ್ತನು ಇನ್ನೂ ಚಿಕ್ಕವನಾಗಿದ್ದನು. ತಂದೆಗೆ ಏಕಮಾತ್ರ ಪುತ್ರನಾದುದರಿಂದ ಅಚ್ಚೆಯಿಂದ ಬೆಳೆದು ಮುಖಸ್ತುತಿಯ ದುಷ್ಟ ಸ್ನೇಹಿತರ ನಡುವೆ ಸಿಕ್ಕಿಕೊಂಡು ಅವರಿಂದುಂಟಾದ ದುಷ್ಟ ಭಾವಕ್ಕೆ ಗುರಿಯಾಗಿದ್ದನು. ಮಂತ್ರಿಗಳು ಎಚ್ಚರಿಸಿದಾಗ ಅವನಿನ್ನೂ ಚಿಕ್ಕವನು. "ಕಲಿಯಬೇಕಾದ ವ್ಯವಧಿ ಇನ್ನೂ ತುಂಬಾ ಇದೆ" ಎಂದು ತಂದೆ ಹೇಳುತ್ತ ಅವನನ್ನು ಏನೂ ಖಾಡಿಸದೆ ಸ್ವೇಚ್ಛೆಯಾಗಿರಲು ಬಿಟ್ಟಿದ್ದನು. ಆದರೆ ಭಾನುಗುಪ್ತನು ತನ್ನ ಮಧ್ಯಮ ವಯಸ್ಸಿನಲ್ಲೇ ಆಕಸ್ಮಿಕವಾಗಿ ತೀರಿಹೋಗಿಬಿಟ್ಟನು. ಆದುದರಿಂದ ಸೋಮಗುಪ್ತನ ಮೇಲೆ ಅಕಸ್ಮಾತ್ತಾಗಿ ರಾಜ್ಯಭಾರವು ಬಿದ್ದಿತು.

ಇಪ್ಪತ್ತೆರಡು ವಯಸ್ಸಿನ ಸೋಮಗುಪ್ತನು ದುಷ್ಟ ಸ್ನೇಹಿತರ ಸಲಹೆಗಳನ್ನು ಕೇಳಿ, ಅನೇಕಮಂದಿ ರಾಜೋದ್ಯೋಗಿಗಳನ್ನು ತೊಲಗಿಸಿಬಿಟ್ಟನು. ಆದರೆ ಎಷ್ಟೋ ಕಾಲದಿಂದ ಪರಿಪಾಲನೆಯಲ್ಲಿದ್ದ ಮಂತ್ರಿಗಳನ್ನು ಮಾತ್ರ ಏನು ಮಾಡಲಿಕ್ಕೂ ಅವನಿಂದ ಸಾಧ್ಯವಾಗಲಿಲ್ಲ. ಅವರ ಮೇಲೆ ಪ್ರಜೆಗಳಿಗೆ ಅಪಾರವಾದ ಗೌರವ ವಿಶ್ವಾಸಗಳಿದ್ದುದರಿಂದ, ಅವರನ್ನು ತೆಗೆದು ಹಾಕಿದರೆ ದೇಶದಲ್ಲಿ ಬಂಡಾಯವೇಳಬಹುದೆಂದು ಅವನಿಗೆ ಭಯವಾಗುತ್ತಿತ್ತು.

ಒಂದುಸಾರಿ ಉತ್ತರದಿಕ್ಕಿನ ಸರಹದ್ದಿನಲ್ಲಿರುವ ಗುಡ್ಡಗಾಡು ಪ್ರಾಂತದಲ್ಲಿ ಚಿಕ್ಕದೊಂದು ಪಿತೂರಿ ನಡೆಯಿತು. ಆ ಗುಡ್ಡಗಾಡು ಪ್ರಾಂತವು ಒಬ್ಬ ಬೇಡರ ದೊರೆಯ ಅಧಿಕಾರದಲ್ಲಿತ್ತು. ಅವನ ಬಂಡಾಯವನ್ನೂ ಮುಂದಾಗಿ ತಿಳಿದ ಸೇನಾಧಿಪತಿ

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು

ಫಕ್ಕನೆ ಕಠಿಣ ದಂಡಯಾತ್ರೆ ಮಾಡಿ ಆ ಬೇಡರ ರಾಜ್ಯದ ಸ್ವಲ್ಪ ಭಾಗವನ್ನು ರತ್ನಪುರಕ್ಕೆ ಸೇರಿಸಿ ಕೊಂಡುಬಿಟ್ಟನು. ಈ ಸಂದರ್ಭದಲ್ಲಿ ಸೋಮಗುಪ್ತನ ಮಿತ್ರರಲ್ಲಿ ಒಬ್ಬನು ಆ ಬೇಡರ ದೊರೆಯ ಪಕ್ಷದವ ನಾಗಿದ್ದನು. ಇವನು ಬೇಡರ ದೊರೆಯಿಂದ ಕಸಿದ ರಾಜ್ಯವನ್ನು ಅವನಿಗೇ ತಿರುಗಿಕೊಡಬೇಕೆಂದು ಹಟ ಹಿಡಿದನು.

ಆಗ ಸೇನಾಧಿಪತಿ, "ಈ ಬೇಡರ ರಾಜ ಒಳ್ಳೆ ಯವನಲ್ಲ. ಭಾನುಗುಪ್ತ ಮಹಾರಾಜರು ತೀರಿ ಹೋದ ಸಮಯದಲ್ಲಿ ಈ ಬೇಡರಾಜ ಶತ್ರುರಾಜ ನೊಂದಿಗೆ ಸೇರಿ ದುಸ್ತಂತ್ರ ಮಾಡಿರುವ ಸಂಗತಿ ನನಗೆ ಗೊತ್ತು. ನನ್ನ ಶರೀರದಲ್ಲಿ ಪ್ರಾಣವಿರುವಾಗ ಅಂತಹ ತಂತ್ರವನ್ನು ಸಾಗಲು ಬಿಡಲಾರೆ. ಅದಕ್ಕೆ ದಂಡನೆಯಾಗಿಯೇ ಆ ರಾಜ್ಯದ ಭಾಗವನ್ನು ವಶ ಪಡಿಸಿಕೊಂಡೆನು. ಅದನ್ನು ತಿರುಗಿಕೊಟ್ಟರೆ ನಾವು ಅವನಿಗೆ ಹೆದರಿದಂತಾಗುತ್ತದೆ. ನಾನು ನಮ್ಮ ದೇಶ ಕ್ಕಾಗಿ ನನ್ನ ರಕ್ತವನ್ನೆಲ್ಲಾ ಧಾರೆಯೆರೆಯಲು ಸಿದ್ಧ ನಿದ್ದೇನೆಯೇ ಹೊರತು, ಶತ್ರುವಿನ ಮುಂದೆ ತಲೆ ಬಾಗುವ ಕೆಲಸ ಮಾಡಲಾರೆ!" ಎಂದನು.

"ಇದು ನನ್ನ ಆಜ್ಞೆ!" ಎಂದ ಸೋಮಗುಪ್ತ. "ಹಾಗಾದರೆ ನಾನು ಪದವಿಯಿಂದ ವಿರಮಿಸಿಕೊಳ್ಳ ಬೇಕಾಗಿ ಬರುತ್ತದೆ" ಎಂದ ಸೇನಾಧಿಪತಿ.

ಸೇನಾಧಿಪತಿಯ ದೃಢನಿರ್ಧಾರದ ಮಾತು ಕೇಳಿ ಸೋಮಗುಪ್ತನ ಕಾಲುಗಳು ತುಸು ತಣ್ಣಗಾದುವು. ಏಕೆಂದರೆ ಸೇನಾಧಿಪತಿ ತನ್ನ ಪದವಿಬಿಟ್ಟುಹೋದರೆ ಸೇನೆಯೊಳಗೆ ಅರಾಜಕ ಉಂಟಾಗುತ್ತದೆ. ಸೈನಿಕರ ದೃಷ್ಟಿಯಲ್ಲಿ ಸೇನಾಧಿಪತಿ ದೇವರಿಗೆ ಸಮ. ಆದು ದರಿಂದ ಸೋಮಗುಪ್ತನು ತನ್ನ ಮಿತ್ರನ ಇಷ್ಟವನ್ನು ನೆರವೇರಿಸದೆ, ಉಪಾಯವಿಲ್ಲದೆ, ಕೈಕೈ ಹಿಸುಕಿ ಕೊಳುತ್ತಾ, ಸೇನಾಧಿಪತಿಯನ್ನು ಅವನಿಷ್ಟದಂತೆ ಮಾಡಲು ಬಿಟ್ಟು ಸುಮ್ಮನಾದನು.



ರತ್ನಪುರ ರಾಜ್ಯದಲ್ಲಿರುವ ಒಳ್ಳೆಯ ಬಂಗಾರ ವೆಲ್ಲಾ ಬಂಗಾರ ನಾಣ್ಯಗಳ ರೂಪದಲ್ಲೇ ಚಲಾವಣೆ ಯಲ್ಲಿದ್ದುವು. ಈ ಬಂಗಾರದ ನಾಣ್ಯಗಳಿಗೆ ವಿದೇಶ ಗಳಲ್ಲಿ ಕೂಡಾ ಒಳ್ಳೆಯ ಬೆಲೆ ಇರುವುದರಿಂದ ಈ ದೇಶದ ವ್ಯಾಪಾರಕ್ಕೆ ಅಭಿವೃದ್ಧಿಯಾಗಿ ತುಂಬಾ ಒಳಿತಾಗುತ್ತಿದ್ದಿತು.

ಆದರೆ ಸೋಮಗುಪ್ತನ ಮಿತ್ರನೊಬ್ಬನು ಸೋಮಗುಪ್ತನನ್ನು ಕುರಿತು, "ಇನ್ನೂ ನಿಮ್ಮ ತಾತನ ಕಾಲದ ನಾಣ್ಯಗಳೇ ಚಲಾವಣೆಯಲ್ಲಿರುವು ದೇನು ಚೆಂದ? ಅಪ್ಪಟ ಬಂಗಾರದ ನಾಣ್ಯಗಳಲ್ಲಿ ಸ್ವಲ್ಪ ತಾಮ್ರವನ್ನು ಬೆರೆಸಿದರೆ, ಅದರಲ್ಲಿ ಉಳಿ ಯುವ ಹೆಚ್ಚಿನ ಬಂಗಾರವು ನಿಮ್ಮ ಸ್ವಂತ ಸೊತ್ತಾಗಿ ಉಳಿಯುತ್ತದೆ." ಎಂದು ಸಲಹೆ ಮಾಡಿದನು.

ಸೋಮಗುಪ್ತನಿಗೆ ಈ ಸಲಹೆ ಹಿಡಿಸಿತು. ಕೂಡಲೇ ಟಂಕಸಾಲೆಯಲ್ಲಿ ಕಲಬೆರಿಕೆಯ ಬಂಗಾರ ನಾಣ್ಯಗಳನ್ನು ಅಚ್ಚು ಹೊಡೆಯಿಸಿದನು.



ಈ ಸಮಾಚಾರ ಬೇಗದಲ್ಲೇ ಸಭಿಕರಿಗೆಲ್ಲಾ ತಿಳಿಯಿತು. ತುಂಬಿದ ಸಭೆಯಲ್ಲಿ ಆರ್ಥಿಕ ಮಂತ್ರಿ ಧನಪತಿ ರಾಜನನ್ನು ಖಂಡಿಸುತ್ತ, "ಇಂಥಾ ಕೆಲಸ ಮಾಡುವಾಗ ಕಡೇಪಕ್ಷ ನನ್ನ ಹತ್ತಿರ ಪ್ರಸ್ತಾವಿಸಬೇಕಿತ್ತು. ನಿಮ್ಮ ತಂದೆಯ ಕಾಲದಲ್ಲಿ ಈ ಬಗೆಯ ಧಿಕ್ಕಾರವು ನಡೆಯಲಿಲ್ಲ. ಇದು ಎಷ್ಟು ಮಾತ್ರಕ್ಕೂ ಒಳ್ಳೆಯದಲ್ಲ" ಎಂದನು.

"ಈಗ ಕಾಲ ಬದಲಾಗಿದೆ. ಇದೀಗ ನನ್ನ ಕಾಲ. ನಾನು ನನಗೆ ಒಳಿತೆಂದು ತೋರಿದುದನ್ನು ಮಾಡುತ್ತೇನೆ" ಎಂದ ಸೋಮಗುಪ್ತ.

"ಕ್ಷಮಿಸಿರಿ. ನಿಮಗಾಗಲೀ ನಿಮ್ಮ ಹಿತಚಿಂತಕರಿಗಾಗಲೀ ಆರ್ಥಿಕಶಾಸ್ತ್ರವೇನು ಗೊತ್ತಿದೆ? ಹಣದ ಚಲಾವಣೆ ವಿಷಯ ಏನು ಗೊತ್ತಿದೆ?" ಎಂದು ಕೇಳಿದ ಧನಪತಿ.

"ಎಲೈ ಮುದಿಮಂತ್ರಿಯೇ, ಹಣವನ್ನು ಕುರಿತು ನಿಮಗೇ ಹೆಚ್ಚು ಗೊತ್ತಿರುವುದೆಂದು ಜಂಬ ಹೊಡೆದುಕೊಳ್ಳಬೇಡಿ. ನಾಣ್ಯಗಳಲ್ಲಿ ಬಂಗಾರದ ಅಂಶ ತುಸು ಕಡಿಮೆಯಾದರೆ ಏನು ಮಹಾಪ್ರಳಯ ಬಂದೀತು? ನಾಣ್ಯದ ಮೇಲೆ ಬರೆದ ಬೆಲೆಯೇ ನಾಣ್ಯದ ಬೆಲೆ" ಎಂದ ರಾಜ.

"ತಾವು ತಪ್ಪು ತಿಳಿದಿದ್ದೀರಿ ಮಹಾರಾಜರೇ. ನಿಮ್ಮ ಹೇಳಿಕೆಯಂತೆ ತಾಮ್ರದ ನಾಣ್ಯವೇ ಬಂಗಾರದ ನಾಣ್ಯ ಎನ್ನುವಂತಾಗಲು ಬಹುದೂರ ಹೋಗಬೇಕಾಗಿಲ್ಲ. ಮಹಾರಾಜಾ, ನನ್ನ ಹಾಗೆ ದೀರ್ಘಕಾಲ ಆರ್ಥಿಕರಂಗದಲ್ಲಿರುವವನಿಗೆ ಅಪ್ಪಟ ಬಂಗಾರದ ನಾಣ್ಯಕ್ಕೂ, ನಕಲೀ ಬಂಗಾರದ ನಾಣ್ಯಕ್ಕೂ ಇರುವ ವ್ಯತ್ಯಾಸವು ಮುಟ್ಟಿ ನೋಡಿದರೇ ಸಾಕು. ತಿಳಿದುಬಿಡುತ್ತದೆ" ಎಂದನು ಧನಪತಿ.

ಧನಪತಿ ಅಷ್ಟಕ್ಕೇ ಬಿಡದೆ ಕೋಪದಿಂದ ಆವೇಶಗೊಂಡು, ಏನೂ ತಿಳಿಯದ ಮೂಢನೆಂದು ರಾಜನನ್ನು ಬೈದುಬಿಟ್ಟನು. ಆ ಮಾತು ಕೇಳಿದ ಕೂಡಲೇ ಸೋಮಗುಪ್ತನ ಅನುಚರರು "ಇವರಿಗೆ ಮುದಿ ಹುಚ್ಚು ತಲೆಗೇರಿದೆ. ಬಂಧಿಸಿಬಿಡಿರಿ!" ಎಂದು ಸೇವಕರಿಗೆ ಹೇಳಿದರು. ರಾಜನೂ "ಹುಂ" ಎಂದ. ರಾಜನನ್ನು ಅವಮಾನಿಸಿದುದರಿಂದ ಧನಪತಿಯನ್ನು ಕಾರಾಗೃಹದಲ್ಲಿ ಇಟ್ಟುಬಿಟ್ಟರು.

ಸೋಮಗುಪ್ತನ ಕಾರ್ಯವು ಯಾರಿಗೂ ಹಿಡಿಸಲಿಲ್ಲ. ಹಾಗೆಂದು ಬಾಯಿಬಿಟ್ಟು ಹೇಳುವಷ್ಟು ಧೈರ್ಯವು ಯಾರಿಗೂ ಇರಲಿಲ್ಲ. ಹೀಗೆ ಧನಪತಿಗೆ ಶಿಕ್ಷೆಯಾದುದರಿಂದ ಅಸಂತೃಪ್ತರಾಗಿರುವವರಲ್ಲಿ ಆಸ್ಥಾನದ ಐಂದ್ರಜಾಲಿಕನಾದ ಮಾಯಾಧರನೂ ಇದ್ದನು. ಅವನು ಏನೋ ಒಂದು ನಿರ್ಧಾರದಲ್ಲಿ ಕಾರಾಗೃಹಕ್ಕೆ ಹೋಗಿ ಧನಪತಿಯೊಂದಿಗೆ ಸ್ವಲ್ಪ ಹೊತ್ತು ರಹಸ್ಯಮಾತನಾಡಿ, ತೃಪ್ತಿಯಿಂದ ಹಿಂದಿರುಗಿ ಬಂದನು.

ಮಾಯಾಧರನ ಮೇಲೆ ಸೋಮಗುಪ್ತನಿಗೂ ಒಳ್ಳೆಯ ಸಲಿಗೆಯಿದ್ದಿತು. ಅವನು ಚಿಕ್ಕ ಹುಡುಗ

ನಾಗಿದ್ದಾಗ ಯಾವಾಗಲೂ ಮಾಯಾಧರನೊಂದಿಗೇ ಇರುತ್ತಿದ್ದನು. ಅವನ ಇಂದ್ರಜಾಲಗಳೆಂದರೆ ಸೋಮಗುಪ್ತನಿಗೆ ತುಂಬಾ ಇಷ್ಟ.

ಒಂದು ದಿನ ಸೋಮಗುಪ್ತನು ತನ್ನ ಮಂದಿರದಲ್ಲಿ ಒಬ್ಬನೇ ವಿರಾಮವಾಗಿದ್ದಾಗ, ಮಾಯಾಧರನು ಅವನ ಬಳಿಗೆ ಹೋಗಿ, ಧನಪತಿಯ ಸಮಾಚಾರವನ್ನು ಪ್ರಸ್ತಾವಿಸಿ, "ಮಹಾರಾಜರೇ, ಒಂದುವೇಳೆ ಧನಪತಿ ಹೇಳಿದ್ದು ನಿಜವೋ ಏನೋ ? ಒಂದೊಂದು ಸಾರಿ ಅನುಭವದ ಮೂಲಕವಾಗಿ ಅದ್ಭುತಶಕ್ತಿಗಳು ಬಂದುಬಿಡುವುದೂ ಉಂಟು. ಅಪ್ಪಟ ಬಂಗಾರಕ್ಕೂ ಕಲಬೆರಿಕೆ ಬಂಗಾರಕ್ಕೂ ಇರುವ ವ್ಯತ್ಯಾಸವು ಮುಟ್ಟಿನೋಡಿದ ಮಾತ್ರಕ್ಕೇ ಗೊತ್ತಾಗುವುದೆಂದು ಧನಪತಿ ಹೇಳಿದ್ದು ನಿಜವಿದ್ದರೂ ಇರಬಹುದು. ಅದು ಹೋಗಲಿ. ಅವರು ದೊಡ್ಡ ಆರ್ಥಿಕಶಾಸ್ತ್ರ ನಿಪುಣರೆಂಬುದಂತೂ ನಿಜವಷ್ಟೆ? ಬಂಗಾರದಲ್ಲಿ ಕಲಬೆರಿಕೆಯನ್ನು ಕಂಡುಹಿಡಿಯುವ ಅವರ ಶಕ್ತಿಯನ್ನು ಪರೀಕ್ಷಿಸಿ ತಿಳಿಯುವುದು ಒಳ್ಳೆಯದು. ಅವರಿಗೆ ಅಂತಹ ಶಕ್ತಿ ಇರುವುದು ನಿಜವಾದರೆ ಕ್ಷಮಿಸಿಬಿಡಬಹುದು. ಇಲ್ಲದಿದ್ದರೆ ಎಲ್ಲರ ಇದಿರಿನಲ್ಲಿಯೂ ಅವರ ಸುಳ್ಳು ರುಜುವಾಗುವುದರಿಂದ ಶಿಕ್ಷೆಯನ್ನು ಖಾಯಂ ಮಾಡುವುದರಿಂದ ಜನರ ಮನಸ್ಸು ಕೆಡುವುದಿಲ್ಲ. ಎಷ್ಟಾದರೂ ಅವರು ಬಹುದೀರ್ಘಕಾಲ ದೇಶಸೇವೆ ಮಾಡಿದವರಲ್ಲವೇ ?" ಎಂದನು.

"ಅದೇನೋ ಸರಿಯೆ. ಆದರೆ ಪರೀಕ್ಷಿಸುವ ಉಪಾಯ ಹೇಗೆ ?" ಎಂದು ಸೋಮಗುಪ್ತನು ಮಾಯಾಧರನನ್ನು ಕೇಳಿದನು.

"ನಾಲ್ಕು ಕಲಬೆರಿಕೆ ಬಂಗಾರದ ನಾಣ್ಯಗಳನ್ನೂ, ಒಂದು ಅಪ್ಪಟ ಬಂಗಾರ ನಾಣ್ಯವನ್ನೂ ಒಂದೇ ಬಗೆಯ ಚೀಲಗಳಲ್ಲಿಟ್ಟು ಎಲ್ಲವನ್ನೂ ಬೆರೆಸಿ ಅಪ್ಪಟ ಬಂಗಾರದ ನಾಣ್ಯವಿರುವ ಚೀಲವನ್ನು



ತೆಗೆದು ತೋರಿಸಲಿ. ಅವರು ಹಾಗೆ ಮಾಡಿಬಿಟ್ಟರೆ ಆರ್ಥಿಕನಿಪುಣರೇ ಸರಿ" ಎಂದ ಮಾಯಾಧರ.

ಈ ವಿಧಾನಕ್ಕೆ ಸೋಮಗುಪ್ತನು ಒಪ್ಪಿದನು. ಆಮೇಲೆ ಮಾಯಾಧರನು ಧನಪತಿಯನ್ನು ಪರೀಕ್ಷಿಸಲು ಬೇಕಾದುವನ್ನು ಅಣಿಗೊಳಿಸತೊಡಗಿದನು. ಒಂದೇ ಆಕಾರವೂ ಬಣ್ಣವೂ ಇರುವ ಐದು ಚೀಲಗಳನ್ನು ತೆಗೆದುಕೊಂಡು, ಒಂದು ಚೀಲದ ಬಾಯಿಯನ್ನು ತನ್ನ ಕಡೆಗೆ ತೆರೆದಿಟ್ಟು, ಸಣ್ಣಗಿನ ಕಡ್ಡಿಯಿಂದ ಅದರೊಳಗಿನ ಒಂದು ಮೂಲೆಯಲ್ಲಿ ಅಂಟುಹಚ್ಚಿ ಸಣ್ಣ ಮಡಿಕೆ ಬೀಳುವಂತೆ ಒತ್ತಿಟ್ಟನು. ಉಳಿದ ನಾಲ್ಕು ಚೀಲಗಳು ಒಂದೇ ವಿಧವಾಗಿದ್ದುವು.

ಧನಪತಿಯ ಪರೀಕ್ಷೆ ನಡೆಯುವ ದಿನ ಸಭೆ ತುಂಬಾ ಜನರು ನೆರೆದಿದ್ದರು. ಮೇಜಿಯ ಮೇಲೆ ನಾಲ್ಕು ಕಲಬೆರಿಕೆಯ ಬಂಗಾರದ ನಾಣ್ಯಗಳೂ, ಒಂದು ಅಪ್ಪಟ ಬಂಗಾರ ನಾಣ್ಯವೂ ಇದ್ದುವು. ಮಾಯಾಧರನು ಧನಪತಿಯ ಕಣ್ಣೆದಿರಿನಲ್ಲೇ

ಒಂದೊಂದು ನಾಣ್ಯವನ್ನೂ ಒಂದೊಂದು ಚೀಲದಲ್ಲಿ ಹಾಕಿ ಚೀಲಗಳ ಬಾಯಿಯನ್ನು ಅಂಟಿಸಿಟ್ಟನು. ಆ ಆ ಮೇಲೆ ನಾಣ್ಯಗಳಿರುವ ಐದು ಚೀಲಗಳನ್ನೂ ದೊಡ್ಡದೊಂದು ಪಾತ್ರದೊಳಗೆ ಹಾಕಿದನು.

ಧನಪತಿಯ ಕಣ್ಣಿಗೆ ಬಟ್ಟೆಕಟ್ಟಲಾಯಿತು. ಪಾತ್ರದ ಮೇಲೆಯೂ ಒಂದು ಬಟ್ಟೆ ಮುಚ್ಚಿದರು. ಧನಪತಿಯನ್ನು ಪಾತ್ರದಬಳಿಗೆ ತಂದು, ಅದರ ಮೇಲಿನ ಬಟ್ಟೆಯ ಮುಸುಕಿನ ಎಡೆಯಲ್ಲಿ ಅವನ ಕೈಯನ್ನು ಪಾತ್ರದೊಳಗೆ ಹೊಗಿಸಲಾಯಿತು. ಧನಪತಿ ಕೈಯಿಂದಲೇ ಮುಟ್ಟಿ ಹುಡುಕಿ, ತಾನು ತೆಗೆಯಬೇಕಾದ ಚೀಲವನ್ನು ಎರಡು ಕ್ಷಣಗಳಲ್ಲೇ ಮೇಲಕ್ಕೆತ್ತಿದನು.

ಧನಪತಿ ಎತ್ತಿದ ಆ ಚೀಲವನ್ನು ಮಾಯಾಧರನ ಕೈಗೆ ಕೊಟ್ಟನು. ಮಾಯಾಧರನು ಅದನ್ನು ಹರಿದು ಅದರೊಳಗಿದ್ದ ನಾಣ್ಯವನ್ನು ತೆಗೆದನು. ಅದು ಅಪ್ಪಟ ಬಂಗಾರದ ನಾಣ್ಯವಾಗಿರುವುದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು.

ಅದೇ ಸಮಯದಲ್ಲಿ ಸೇನಾಧಿಪತಿ ಕೆಲವಂದಿ ವಿದೇಶೀಯರನ್ನು ಬಂದಿಗಳನ್ನಾಗಿ ಮಾಡಿಕೊಂಡು ಸಭೆಯೊಳಗೆ ಪ್ರವೇಶಿಸಿದನು. ಆ ಬಂದಿಗಳನ್ನು ನೋಡಿದ ಕೂಡಲೇ ಸೋಮಗುಪ್ತನ ಮಿತ್ರರು ಮರದ ಬೊಂಬೆಗಳಂತೆ ಸ್ತಬ್ಧರಾದರು. ಆ ವಿದೇಶೀಯರು ಸಭೆಯೊಳಗಿನಿಂದ ಮೆಲ್ಲನೆ ಜಾರಿಕೊಳ್ಳುವುದನ್ನು ನೋಡಿ, ಸೇನಾಧಿಪತಿ ಅವರನ್ನು ಹಿಡಿಯುವಂತೆ ಭಟರಿಗೆ ಆಜ್ಞಾಪಿಸಿದ್ದನು.

ಆ ವಿದೇಶೀಯರು ತಮ್ಮ ತಪ್ಪುಗಳನ್ನು ಒಪ್ಪಿಕೊಂಡರು. ಆ ಪರದೇಶದವರು ಸೋಮಗುಪ್ತನ ಮಿತ್ರರ ಸಹಾಯದಿಂದ ರತ್ನಪುರವನ್ನು ಕೊಳ್ಳೆ ಹೊಡೆಯುವಂತಹ ದುಸ್ತಂತ್ರ ಮಾಡಿದ ವಿಷಯ ಬಯಲಾಯಿತು. ತನ್ನ ಮಿತ್ರರೇ ತನ್ನ ದೇಶವನ್ನು ಕೊಳ್ಳೆ ಹೊಡೆಯಲು ಸಂಚು ನಡೆಸಿದರೆಂಬುದನ್ನು ತಿಳಿದು ಸೋಮಗುಪ್ತನು, ತನ್ನ ತಪ್ಪನ್ನು ಒಪ್ಪಿಕೊಂಡು, ಅವರನ್ನೆಲ್ಲ ಗಡೀಪಾರು ಮಾಡಿಸಿದನು. ಆ ಮೇಲೆ ತಂದೆಯ ಕಾಲದ ಮಂತ್ರಿಗಳ ಸಹಾಯದಿಂದ ಒಳ್ಳೆಯ ರೀತಿಯಲ್ಲಿ ರಾಜ್ಯಪಾಲನೆ ಮಾಡತೊಡಗಿದನು.

ಮಾಯಾಧರನು ಒಂದು ಚೀಲದ ಮೂಲೆಯಲ್ಲಿ ಅಂಟು ಹಚ್ಚಿ ಮಡಿಕೆಯೊತ್ತಿದ್ದನಷ್ಟೆ ? ಆ ಚೀಲದಲ್ಲೇ ಅಪ್ಪಟ ಬಂಗಾರದ ನಾಣ್ಯವನ್ನು ಹಾಕಿದ್ದನು; ಉಳಿದ ನಕಲೀ ನಾಣ್ಯಗಳು ಚೀಲದ ಮೂಲೆಯವರೆಗೂ ಹೋಗಿದ್ದುವು. ಅಪ್ಪಟ ಬಂಗಾರದ ನಾಣ್ಯ ಮೂಲೆಯನ್ನು ಸೇರುವ ಮೊದಲೇ ನಿಂತು ಹೋಗಿತ್ತು. ಧನಪತಿ ಸ್ಪರ್ಶದ ಮೂಲಕ ಅಪ್ಪಟ ಬಂಗಾರದ ನಾಣ್ಯವಿರುವ ಚೀಲವನ್ನು ಅರಿತನು.



# ವಿಚಿತ್ರ ವ್ಯಾಪಾರ

**ಸತ್ಯ**ಶೀಲನೆಂಬ ರಾಜನಿಗೆ ಒಂದು ನಿಯಮವಿದ್ದಿತು. ಅವನು ಪ್ರತಿದಿನ ಬೆಳಿಗ್ಗೆ ತನ್ನ ಬಳಿಗೆ ಯಾರು ಯಾವ ವ್ಯಾಪಾರ ವಸ್ತು ತಂದರೂ ಚೌಕಾಸಿ ಮಾಡದೆ ಹೇಳಿದ ಬೆಲೆ ಕೊಟ್ಟುಕೊಂಡು ಕೊಳ್ಳುವನು. ಹಾಗೆ ಮಾಡುವುದರಿಂದ ತನಗೂ ತನ್ನ ದೇಶಕ್ಕೂ ಲಾಭವಾಗುವುದೆಂದು ಅವನ ನಂಬುಗೆ. ಎಷ್ಟೋ ಬಾರಿ ಅದರಿಂದ ಒಳಿತಾಗಿತ್ತು ಕೂಡ.

ರಾಜಧಾನಿ ನಗರದಲ್ಲಿ ದಟ್ಟದರಿದ್ರನಾದ ಒಬ್ಬ ಬ್ರಾಹ್ಮಣನಿದ್ದ. ಎಷ್ಟು ಪ್ರಯತ್ನಿಸಿದರೂ ತೊಲಗದಿರುವ ತನ್ನ ದಾರಿದ್ರ್ಯವನ್ನು ಏಕೆ ರಾಜನಿಗೆ ಮಾರಬಾರದೆಂದು ಅವನಿಗೆ ತೋರಿತು.

ಕೂಡಲೇ ಅವನು ತನ್ನ ಹರಕು ಕಂಬಳಿಯನ್ನೂ, ಮುರುಕುತಪ್ಪಲೆಗಳನ್ನೂ ಹಳೆಯ ಚಪ್ಪಲಿಗಳನ್ನೂ ಗಂಟು ಕಟ್ಟಿ ತಲೇ ಮೇಲೆ ಹೊತ್ತುಕೊಂಡು, ಮೂಡಲು ಬೆಳಗಾಗುವ ಹೊತ್ತಿಗೆ ರಾಜಭವನದ ಹತ್ತಿರ ಹೋಗಿ, "ಯಾರಾದರೂ ಕೊಂಡುಕೊಳ್ಳಿರಿ ! ಸಾಧಾರಣದವರು ಕೊಂಡುಕೊಳ್ಳಲಾಗದ ವಸ್ತು ! ಅಪರೂಪದ ವಸ್ತು ! ಎಲ್ಲಿಯೂ ಸಿಗಲಾರದ್ದು !" ಎಂದು ಕೂಗಿ ಕೂಗಿ ಹೇಳಿದನು.

ರಾಜನು ಅವನನ್ನು ಒಳಗೆ ಕರೆಯಿಸಿ, "ಏನಿದೆ ಗಂಟಿನಲ್ಲಿ ?" ಎಂದು ಕೇಳಿದ.

"ಮಹಾಪ್ರಭುಗಳೇ, ಇದು ನನ್ನ ದಾರಿದ್ರ್ಯ. ವಂಶ ಪಾರಂಪರ್ಯವಾಗಿ ಬಂದ ಸೊತ್ತು. ನನ್ನ ಸ್ವಂತದ್ದು !" ಎಂದ ಬ್ರಾಹ್ಮಣ.

"ಏನು ಬೆಲೆ ?" ಎಂದು ಕೂಡಲೇ ಕೇಳಿದ ರಾಜ.

"ಐನೂರು ವರಹಗಳು" ಎಂದ ಬ್ರಾಹ್ಮಣ.

ರಾಜನು ಆ ಹಣ ಕೊಟ್ಟು ಗಂಟನ್ನು ಕೊಂಡುಕೊಂಡನು.





# ತನ್ನ ಮಗ

ಹಿಂದೆ ಒಂದು ಊರಿನಲ್ಲಿ ವರಲಕ್ಷ್ಮಿ ಎಂಬ ಶ್ರೀಮಂತಳಿದ್ದಳು. ಅವಳಿಗೆ ಚಂದ್ರಶೇಖರ ಒಬ್ಬನೇ ಮಗ. ಚಂದ್ರಶೇಖರನಿಗೆ ಪ್ರಾಯ ಬರುವುದಕ್ಕೆ ಮೊದಲೇ ಅವನ ತಂದೆ ತೀರಿಹೋಗಿದ್ದರು. ಎಲ್ಲಾ ಸೊತ್ತುಗಳಿಗೂ ಯಜಮಾನಿಯಾಗಿ ವರಲಕ್ಷ್ಮಿ ತನ್ನ ಏಕಮಾತ್ರ ಪುತ್ರನನ್ನು ಬಹಳ ಅಕ್ಕರೆಯಿಂದ ಬೆಳೆಸುತ್ತ, ಅವನ ಮೇಲೆಯೇ ತನ್ನ ಎಲ್ಲಾ ಆಶೆಗಳನ್ನೂ ಇಟ್ಟುಕೊಂಡಿದ್ದಳು. ಚಂದ್ರಶೇಖರನಿಗೆ ಸರಿಯಾದ ವಯಸ್ಸು ಬಂದ ಕೂಡಲೇ ಸುಭದ್ರ ಎಂಬ ಹುಡುಗಿಯೊಂದಿಗೆ ಮದುವೆ ಮಾಡಿಸಿದಳು.

ಸುಭದ್ರೆಗೆ ಅತ್ತೆಯ ಮನೆಯಲ್ಲಿ ಎಲ್ಲವೂ ಚೆನ್ನಾಗಿಯೇ ಹಿಡಿಸಿತು. ಅತ್ತೆಯ ರೀತಿ ನೀತಿ ನಡವಳಿಕೆಗಳೂ ಅವಳಿಗೆ ಹಿಡಿಸಿದುವು. ಆದರೆ ಅತ್ತೆಗಿರುವ ಒಂದೇ ಒಂದು ಗುಣಮಾತ್ರ ಬರುಬರುತ್ತ ಸುಭದ್ರೆಗೆ ಅತೃಪ್ತಿಯನ್ನುಂಟುಮಾಡುತ್ತಿತ್ತು. ಅದು ವರಲಕ್ಷ್ಮಿಗಿರುವ ದಾತೃತ್ವಗುಣ. ಅವಳು ತನಗಿರುವುದರಲ್ಲೇ ಸ್ವಲ್ಪ ಹೆಚ್ಚಾಗಿ ದಾನಧರ್ಮ ಮಾಡುತ್ತಿದ್ದಳು. ಇದೊಂದು ಸಣ್ಣ ವಿಷಯಕ್ಕಾಗಿ ಸುಭದ್ರೆ ಮನೋವ್ಯಾಧಿಯಿಂದ ತೊಳಲಬೇಕಾಗಿರಲಿಲ್ಲ. ಏಕೆಂದರೆ ವರಲಕ್ಷ್ಮಿಗಿರುವ ಆಸ್ತಿ ಅಷ್ಟು ಮಾತ್ರಕ್ಕೆ ಕರಗಿಹೋಗುವಂತಹುದಲ್ಲ. ಆದರೆ ಸುಭದ್ರೆಯಲ್ಲಿರುವ ಜಿಪುಣತನಕ್ಕೆ ಅದೇನೋ ಬ್ರಹ್ಮಾಂಡವಾಗಿ ತೋರುತ್ತಿತ್ತು. ತನ್ನ ಗಂಡ ಕಷ್ಟಬಟ್ಟು ಸಂಪಾದಿಸಿದ್ದನ್ನೆಲ್ಲಾ ಈ ಅತ್ತೆ ಬೂದಿ ಮಾಡುತ್ತಾರಲ್ಲಾ!

ಈ ನೋವನ್ನು ಬಹಳ ಕಾಲ ಮನಸ್ಸಿನೊಳಗೆ ಹುದುಗಿಸಿಕೊಳ್ಳಲಾಗದೆ, ಒಂದು ದಿನ ಹೊರಗೆ ಕಕ್ಕಿದಳು. ಅದನ್ನು ಕೇಳಿ ವರಲಕ್ಷ್ಮಿ, "ಹಾಗೆ ಹೇಳಬಾರದಮ್ಮ. ನಮಗಿರುವುದನ್ನೇ ನಾಲ್ಕು ಜನರಿಗೆ ಹಂಚುವುದರಿಂದ ದೊಡ್ಡ ನಷ್ಟವೇನೂ ಬಾರದು. ಹೋಗುವಾಗ ಏನಾದರೂ ಕಟ್ಟಿಕೊಂಡು ಹೋಗುತ್ತೇವೆಯೇ?" ಎಂದಳು.

ಆದರೂ ಸುಭದ್ರೆಗೆ ಸಮಾಧಾನವಾಗಲಿಲ್ಲ. ರೇಗಿಕೊಂಡೂ ಗೊಣಗಿಕೊಂಡೂ ಇದ್ದಳು. ಕಡೆಗೆ ಒಂದು ದಿನ ವರಲಕ್ಷ್ಮಿ, "ನಾನು ನಿನ್ನ ತೌರುಮನೆಯಿಂದ ಬಂದುದಾವುದನ್ನೂ ಹಾಳು ಮಾಡಲಿಲ್ಲ. ಯಾಕೆ ಹೆಚ್ಚಾಗಿ ಮನಸ್ಸಿಗೆ ಹಚ್ಚಿಕೊಳ್ಳೀ ?" ಎಂದಳು.

ಇನ್ನು ಈ ಅತ್ತೆಯ ಬುದ್ಧಿಯನ್ನು ತನ್ನಿಂದ ಬದಲಾಯಿಸಲು ಸಾಧ್ಯವಿಲ್ಲವೆಂದುಕೊಂಡು ಸುಭದ್ರೆ

ಜಿ. ಶಿವಶಂಕರ

ತನ್ನ ಗಂಡನೊಂದಿಗೆ, "ನೋಡಿದಿರಾ ನಿಮ್ಮ ಅಮ್ಮನ ಕೆಲಸ? ಅವರು ಹೀಗೇ ಮಾಡ್ತಾ ಇದ್ರೆ ಒಂದು ದಿನ ನಮ್ಮ ಕೈಗೆ ಚಿಪ್ಪು ಬರುತ್ತೆ. ಮುಂಜಾಗ್ರತೆಗಾಗಿ ನಾನು ಹೇಳುವುದು ತಪ್ಪು ಅನ್ನುವಿರಾ? ನೀವೇ ಸ್ವಲ್ಪ ಅವರಿಗೆ ಹೇಳಿಬಿಡಿ" ಎಂದಳು.

"ಅಮ್ಮನಿಗೆ ನಾನೂ ನೀನೂ ಬುದ್ಧಿ ಹೇಳೋದೆಂದರೇನೇ? ಯಾವಾಗಿನಿಂದಲೋ ನಡೆದುಕೊಂಡು ಬಂದ ಗುಣ ಅದು. ಸುಮ್ಮನಿರು" ಎಂದು ಚಂದ್ರಶೇಖರನು ಹೆಂಡತಿಯ ಮಾತನ್ನು ಲಕ್ಷ್ಯಮಾಡದೆ ಸುಮ್ಮನಿದ್ದನು. ಆದರೆ ಸುಭದ್ರೆ ಪದೇಪದೇ ಅವನಿಗೆ ಹೇಳುವುದನ್ನು ಬಿಡಲಿಲ್ಲ. ಕಡೆಗೆ ಅವನೂ ಸಹ ಹೆಂಡತಿಯ ದಾರಿಗೆ ಬಂದೇ ಬಂದನು. "ನಾನು ಏನು ಮಾಡಬೇಕು ಅಂತ ನಿನ್ನ ಅಭಿಪ್ರಾಯ?" ಎಂದು ಹೆಂಡತಿಯನ್ನು ಕೇಳಿದ.

"ನೀವು ನಿಮ್ಮ ಅಮ್ಮನ ಹತ್ರ ಜಗಳ ಕಾಯಬೇಕು ಅಂತ ನಾನು ಹೇಳೋಲ್ಲ. ನಾಳೆ ನಮಗೆ ಮಕ್ಕಳುಮರಿ ಆಗುತ್ತವೆ. ಅವುಗಳ ಒಳಿತಿಗಾದರೂ ನಾವು ಬೇರೆ ಬಿಡಾರ ಮಾಡಿಕೊಳ್ಳುವುದೇ ಒಳ್ಳೆಯದು" ಎಂದಳು ಸುಭದ್ರೆ.

ಚಂದ್ರಶೇಖರನು ಹೆಂಡತಿಯ ಮಾತು ಕೇಳಿ ಬೇರೆ ಬಿಡಾರ ಮಾಡಿಕೊಂಡನು. ಹೇಗಾದರೂ ಮಕ್ಕಳು ಚೆಂದಾಗಿರಲಿ ಎಂದುಕೊಂಡು ವರಲಕ್ಷ್ಮಿ ಅವರಿಬ್ಬರನ್ನೂ ಒಳ್ಳೆಯ ರೀತಿಯಲ್ಲೇ ಬೇರೆ ಬಿಡಾರಕ್ಕೆ ಕಳುಹಿಸಿದಳು. ಕಾಲಕ್ರಮದಲ್ಲಿ ಸುಭದ್ರೆ ಒಬ್ಬ ಮಗನಿಗೆ ತಾಯಿಯೂ ಆದಳು. ಮಗನು ಹುಟ್ಟಿದ ಮೇಲೆ ಸುಭದ್ರೆಯಲ್ಲಿ ಉಂಟಾದ ಬದಲಾವಣೆಯನ್ನು ನೋಡಿ, ಚಂದ್ರಶೇಖರನಿಗೆ ಆಶ್ಚರ್ಯವಾಯಿತು. ಅವಳು ತನ್ನ ಮಗನನ್ನೇ ಸರ್ವಸ್ವವೆಂಬಂತೆ ನೋಡಿಕೊಳ್ಳುತ್ತ, ಗಂಡನನ್ನು ಕೂಡಾ ಮರೆತುಬಿಡುವಷ್ಟರ ಮಟ್ಟಿಗೆ ಬದಲಾಯಿಸಿಬಿಟ್ಟಿದ್ದಳು.

ಒಂದು ದಿನ ಸಾಯಂಕಾಲ ಚಂದ್ರಶೇಖರನು ಮನೆಗೆ ಬಂದಾಗ, ನೆರೆ ಮನೆಯವಳು ಸುಭದ್ರೆಯೊಂದಿಗೆ ಮಾಡುಡುತ್ತ, ಮಕ್ಕಳ ಬೆಳವಣಿಗೆಯನ್ನು ಕುರಿತು ತೆಗೆದುಕೊಳ್ಳಬೇಕಾದ ಜಾಗ್ರತೆಗಳನ್ನು ಹೇಳು



ತ್ತಿದ್ದಳು. ಕಡೆಗೆ, "ನಾವೇನೋ ಮಗನನ್ನು ಬಹಳ ಪ್ರೀತಿಮಾಡಿ, ನಂಬಿಗೆಯಿಟ್ಟು ಕಷ್ಟಪಟ್ಟು ಸಾಕುತ್ತೇವೇ ಅನ್ನು. ದೊಡ್ಡವರಾದ ಮೇಲೆ ನಮ್ಮನ್ನು ಈ ಮಕ್ಕಳು ನೋಡುತ್ತಾರೆ ಅನ್ನಲು ಸಾಧ್ಯವಿಲ್ಲ. ಮಡಿಲಲ್ಲಿದ್ದಾಗ ಮಕ್ಕಳೇ ಹೊರತು ಕುಡಿಮೀಸೆ ಮೊಳೆತ ಮೇಲೆ ಮಕ್ಕಳಲ್ಲ ಅಂತ ಹೇಳುವುದು ಅದಕ್ಕೇ" ಎಂದಳು.

ಅದನ್ನು ಕೇಳಿ ಸುಭದ್ರೆ ಆವೇಶದಿಂದ, "ಯಾವ ಮಕ್ಕಳೋ ಹಾಗೆಲ್ಲಾ ಆದರೂ ಅಂತ ನನ್ನ ಮಗ ಆಗ್ತಾನೇ ಅಂದುಕೊಂಡ್ರಾ? ಹಾಗಾಗಲಿಕ್ಕೆ ನಾನು ಬಿಟ್ಟರೆ ತಾನೇ? ತಂದೆ ತಾಯಿಗಳ ಋಣ ತೀರಿಸುವಂಥ ಒಳ್ಳೇ ಬುದ್ಧಿ ಬರುವ ಹಾಗೆ ತಿದ್ದೀ ತೀಡೀ ಇವನನ್ನು ಬೆಳೆಸುತ್ತೇನೆ. ತಾಯಿ ತಂದೆಯರ ಕಷ್ಟದಿಂದ ಬೆಳೆದು ದೊಡ್ಡವನಾಗಿ, ತನ್ನ ಸ್ವಾರ್ಥ ನೋಡಿಕೊಳ್ಳುವಂಥ ಶುಂಠನಾಗುವ ಹಾಗೆ ನಾನು ಬಿಡುವುದಿಲ್ಲ ಇವನನ್ನು! ಎಲ್ಲಾ ನಾವು ಬೆಳೆಸುವುದರಲ್ಲಿದೆ" ಎಂದಳು.

ಈ ಮಾತುಗಳನ್ನು ಕೇಳಿ ಚಂದ್ರಶೇಖರನು ಮಾರುದಿನವೇ ತನ್ನ ಬಿಡಾರವನ್ನು ರದ್ದುಪಡಿಸಿ, ಸುಭದ್ರೆಯನ್ನೂ ಮಗನನ್ನೂ ತನ್ನ ತಾಯಿಯೊಂದಿಗೆ ಇರುವ ಏರ್ಪಾಡು ಮಾಡತೊಡಗಿದನು. "ಇದೇನೂಂದ್ರೆ? ಫಕ್ಕನೆ ಏನಾಯಿತು? ನಿಮಗೇನಾದರೂ ಹುಚ್ಚು ಹಿಡಿಯಿತೇ?" ಎಂದು ಸುಭದ್ರೆ ಕೇಳಿದಳು.

"ಇಲ್ಲ, ಹಿಡಿದ ಹುಚ್ಚು ಬಿಟ್ಟುಹೋಯಿತು. ಸುಭದ್ರಾ, ನೀನು ತುಂಬ ಸ್ವಾರ್ಥಬುದ್ಧಿಯುವಳು. ನಿನ್ನ ಮಗಮಾತ್ರ ತನ್ನ ಸ್ವಾರ್ಥ ನೋಡಿಕೊಳ್ಳುವ ಶುಂಠನಾಗಬಾರದು, ನಿನ್ನ ಗಂಡ ಅಂಥ ಶುಂಠನಾದರೆ ನಿನಗೆ ಒಳ್ಳೇದೆನಿಸುತ್ತೆ. ಅಂಥಾ ಶುಂಠನಾಗಿರಲು ನಾನು ಒಪ್ಪಲಾರೆ." ಎಂದನು.

ಮುಂಚಿನ ದಿನ ನೆರೆಮನೆಯವಳೊಂದಿಗೆ ತಾನು ಹೇಳಿದ ಮಾತು ಸುಭದ್ರೆಗೆ ನೆನಪಾಗಿ, ಅವಳ ನಾಲಗೆಯೇ ಬಿದ್ದುಹೋಯಿತು.

"ನೋಡು ಸುಭದ್ರಾ, ನೀನು ನಿನ್ನ ಮಗನನ್ನು ಎಷ್ಟೊಂದು ಅಕ್ಕರೆಯಿಂದ ಬೆಳೆಸುವಿಯೋ, ನನ್ನ ಅಮ್ಮ ನನ್ನನ್ನು ಕೂಡಾ ಅಷ್ಟೇ ಅಕ್ಕರೆಯಿಂದ ಬೆಳೆಸಿ, ನನ್ನ ಮೇಲೆ ಎಷ್ಟೋ ಆಶೆಗಳನ್ನಿಟ್ಟುಕೊಂಡಿದ್ದಾಳೆ. ನನ್ನ ಸ್ವಾರ್ಥವನ್ನು ನಾನು ನೋಡಿಕೊಂಡು ನನ್ನ ತಾಯಿಯನ್ನು ನಿರಾಕರಿಸುವುದು ತಪ್ಪಲ್ಲವೇನೇ? ನಾಳೆ ನಿನ್ನ ಮಗನೂ ಹೆಂಡ್ತಿ ಮಾತು ಕೇಳಿ ಹಾಗೆ ಮಾಡಬಾರದಷ್ಟೆ?" ಎಂದನು.

ಸುಭದ್ರೆಗೆ ನಿಜಕ್ಕೂ ಪಶ್ಚಾತ್ತಾಪವಾಯಿತು. ಆ ಮೇಲೆ ಅವಳು ಅತ್ತೆಯೊಂದಿಗೆ ಯಾವ ತಕರಾರೂ ಇಲ್ಲದೆ ಸೊಗಸಾಗಿ ನಡೆದುಕೊಳ್ಳುತ್ತ ಮನೆ ತುಂಬಿದ ಸೊಸೆಯಾಗಿದ್ದಳು.





# ರಾಕ್ಷಸನ ಭಯ

ಪರರಿಗೆ ಹಿತಮಾಡುವದನ್ನೇ ಧ್ಯೇಯವನ್ನಾಗಿಟ್ಟು ಕೊಂಡಿದ್ದ ಚಿನ್ನಪ್ಪನು, ತನ್ನ ಸಂಗಾತಿಯಾದ ನಾಯಿ ಯೊಂದಿಗೆ ಹೋಗುತ್ತಾ, ದೊಡ್ಡದೊಂದು ಗುಡ್ಡದ ಸಮೀಪಕ್ಕೆ ಬಂದನು. ಆ ಗುಡ್ಡದ ಪಕ್ಕದಲ್ಲಿ ತುಸು ದೂರ ಕಾಂಚನಪುರವೆಂಬ ಸಣ್ಣದೊಂದು ಊರಿತ್ತು. ಚಿನ್ನಪ್ಪನು ಅಲ್ಲಿದ್ದ ಕೊಳದಲ್ಲಿ ಕೈಕಾಲು ತೊಳೆದು ಕೊಂಡು ದಾಹಶಾಂತಿ ಮಾಡಿ, ಗುಡ್ಡದಲ್ಲಿದ್ದೊಂದು ಗುಹೆಯ ಹತ್ತಿರ ವಿಶ್ರಾಂತಿಗೆ ಕುಳಿತನು.

ಆಗ ಒಂದು ವಿಚಿತ್ರ ದೃಶ್ಯವನ್ನು ನೋಡಿದನು. ಒಬ್ಬ ಮನುಷ್ಯ ಒಂದು ಕತ್ತೆಯನ್ನೂ, ಮೇಕೆ ಯನ್ನೂ ಹೊಡೆದುಕೊಂಡು ಆ ಗುಹೆಯ ಕಡೆಗೇ ಬಂದನು. ಕತ್ತೆಯ ಬೆನ್ನಿನ ಮೇಲೆ ಅನ್ನದ ಚೀಲ ಗಳೂ, ಬೇಯಿಸಿದ ಕೋಳಿಗಳೂ ಇದ್ದುವು. ಗುಹೆಯ ಹತ್ತಿರ ಬಂದ ಆ ಮನುಷ್ಯ ಮೇಕೆಯನ್ನು ಕೂಡಾ ಕತ್ತೆಯ ಕೊರಳಿಗೇ ಕಟ್ಟಿ ಎರಡನ್ನೂ ಗುಹೆಯೊಳಗೆ ದೂಡಿ, ತಾನು ಹೊರಬದಿಯಲ್ಲೇ ನಿಂತನು. ಮೇಕೆ ತಟಪಟಾಯಿಸಿಕೊಂಡು ಅರಚುತ್ತಿದ್ದರೂ ಕತ್ತೆ ಅದನ್ನು ಗುಹೆಯೊಳಗೆ ಎಳೆದುಕೊಂಡುಹೋಯಿತು. ಚಿನ್ನಪ್ಪನು ಆ ಮನುಷ್ಯನೊಂದಿಗೆ, "ಗುಹೆಯೊಳಗೆ ಯಾರಿದ್ದಾರೆ? ಅಷ್ಟೊಂದು ಆಹಾರ ಪದಾರ್ಥ ಗಳನ್ನು ಒಳಗೆ ಕಳುಹಿಸಿದೆ ಏಕೆ? ನೀನು ಹೊರಗೇ ಇರುವೆಯಲ್ಲಾ?" ಎಂದು ಕೇಳಿದನು.

ಆ ಮನುಷ್ಯ ಚಿನ್ನಪ್ಪನನ್ನು ನೋಡಿ, "ನೀನು ಹೊಸಬ ಅಂತ ಕಾಣುತ್ತೆ. ನಿನಗೆ ಆಶ್ಚರ್ಯವಾದರೂ ನಮಗೆ ಇದು ಮಾಮೂಲು ಕಥೆ. ಈ ಊರಿಗೆ ಹಿಡಿದ ಪೀಡೆ ಬಿಡೋದೆಲ್ಲಿ ಬಂತು? ಅನುಭವಿಸ ಬೇಕಾದ್ದೇ" ಎಂದನು.

"ನಾನು ಕೆಲವು ಗ್ರಾಮಗಳಿಗೆ ಹಿಡಿದ ಪೀಡೆ ಗಳನ್ನು ಬಿಡಿಸಿದವನೇ, ನಿಮ್ಮ ಗ್ರಾಮಕ್ಕೆ ಬಂದಿರುವ ಪೀಡೆ ಏನೆಂದು ಹೇಳಿದರೆ, ಬಿಡಿಸಲಿಕ್ಕೆ ಆಗುತ್ತದೋ ನೋಡುತ್ತೇನೆ. ಸ್ವಲ್ಪ ವಿವರಿಸಿ ಹೇಳು ನೋಡುವಾ" ಎಂದ ಚಿನ್ನಪ್ಪ.

ಆ ಮನುಷ್ಯನಿಗೆ ನಗೆ ಬಂದಿತು. "ಇದೇನೋ ಮಂತ್ರಕ್ಕೆ ಬಿಟ್ಟುಹೋಗುವ ಪೀಡೆಯಾಗಿದ್ದರೆ ನಮ್ಮ ಮಂತ್ರದ ಹೋತಯ್ಯ ಎಂದೋ ಓಡಿಸುತ್ತಿದ್ದ. ಅಂಥವನನ್ನೇ ಕಬಳಿಸಿದ ರಾಕ್ಷಸನನ್ನು ನೀನೇನು ಮಾಡಬಲ್ಲೆ? ಅವನು ನಿನ್ನನ್ನು ಒಂದೇ ಹಲ್ಲಿನಲ್ಲಿ ಕಚ್ಚಿನುಂಗಿಯಾನು. ಪೂರ್ವಕಾಲದಲ್ಲಿ ಈ ರಾಕ್ಷಸ

ಬಿ. ಎನ್. ರಾವ್



ಈ ಗುಹೆಯೊಳಗಿದ್ದು, ಆಗಾಗ ಊರ ಮೇಲೆ ಬಿದ್ದು ಜನರನ್ನೇ ಹಿಡಿದು ತಿನ್ನುತ್ತಿದ್ದನಂತೆ. ಆಗ ಜನರೆಲ್ಲಾ ಊರು ಬಿಟ್ಟು ಎಲ್ಲಿಗೋ ಓಡಿಹೋದರಂತೆ. ಹಾಗೆ ಹೆದರಿಹೋದರೂ ಊರಿನ ನೆನಪು ಬಿಡಲಿಕ್ಕಾಗುತ್ತೆಯೆ ? ಒಂದು ವರ್ಷದ ಮೇಲೆ ರಾಕ್ಷಸ ಬೇರೆ ಕಡೆಗೆ ಹೋಗಿದ್ದಾನು ಅಂದುಕೊಂಡು ಮೆಲ್ಲನೆ ಊರಿಗೆ ಬಂದು, ರಾಕ್ಷಸನ ಜಾಡು ಇಲ್ಲವೆಂದು ಗಟ್ಟಿ ಮಾಡಿಕೊಂಡು, ಎಂದಿನಂತೆ ಇರತೊಡಗಿದರು. ಕ್ರಮೇಣ ರಾಕ್ಷಸನ ಸಂಗತಿ ಎಲ್ಲರೂ ಮರೆತರು. ಹೀಗಿರುವಾಗ ಇತ್ತೀಚೆಗೆ ಸುಮಾರು ಆರು ತಿಂಗಳ ಹಿಂದೆ ಮತ್ತೆ ಈ ಗ್ರಾಮದಲ್ಲಿ ಕೋಳಿ, ಕುರಿ, ಮೇಕೆ ಮುಂತಾದ ಪ್ರಾಣಿಗಳು ಮಾಯವಾಗತೊಡಗಿದುವು. ಮಸುಕು ಬೆಳುದಿಂಗಳಿನಲ್ಲಿ ಮಾಂತ್ರಿಕ ಹೋತಯ್ಯನ ಶಿಷ್ಯರಿಗೆ ಗುಡ್ಡದ ಮೇಲೆ ತಾಳೇ ಮರದ ಪ್ರಮಾಣದಲ್ಲಿ ರಾಕ್ಷಸನೇ ಕಾಣಿಸಿದನಂತೆ ! ಹೋತಯ್ಯನ ಧೈರ್ಯಕ್ಕೆ ಈಡು ಜೋಡಿಲ್ಲ. ಅವನು ಒಬ್ಬನೇ ಗುಹೆಯೊಳಗೆ ಹೊಕ್ಕು ರಾಕ್ಷಸನೊಂದಿಗೆ ಮಾತಾಡಿ, ಒಂದು ಒಪ್ಪಂದ ಮಾಡಿಕೊಂಡು ಬಂದ. ಗ್ರಾಮಸ್ಥರು ಸರದೀ ಪ್ರಕಾರ ಅವನಿಗೆ ದಿನಾ ಆಹಾರ ಕಳಿಸುತ್ತಿರಬೇಕು. ಅವನ ನೆರಳು ಕೂಡಾ ಊರ ಕಡೆಗೆ ಹಾಯಬಾರದು. ಇದೇ ಒಪ್ಪಂದದ ನಿಬಂಧನೆ. ಯಾವ ಕಾಲದಲ್ಲಿಯೂ ರಾಕ್ಷಸರೊಂದಿಗೆ ಇಂತಹ ಒಪ್ಪಂದ ಮಾಡಿಕೊಂಡವರು ಯಾರೂ ಇಲ್ಲವಷ್ಟೆ ? ಆದುದರಿಂದ ಹೋತಯ್ಯ ಮಾಡಿದ ಏರ್ಪಾಡಿಗೆ ಊರವರೆಲ್ಲಾ ಒಪ್ಪಿಕೊಂಡರು. ಆದರೆ ಒಮ್ಮೆ ರಾಕ್ಷಸನು ತನ್ನ ಮಾತಿನ ಮೇಲೆ ನಿಲ್ಲದೆ ಒಂದು ದೊಡ್ಡ ದುಷ್ಟ ಕೆಲಸ ಮಾಡಿಬಿಟ್ಟ. ಒಂದು ದಿನ ಹೋತಯ್ಯ ತನ್ನ ಕುಟುಂಬವನ್ನೂ, ತನ್ನ ನಾಲ್ಕುಮಂದಿ ಶಿಷ್ಯರ ಕುಟುಂಬಗಳನ್ನೂ ದೂರದ ಗ್ರಾಮದಲ್ಲಿ ನಡೆಯುವ ಜಾತ್ರೆ ನೋಡಲು ಕಳುಹಿಸಿದನು. ಅಂದಿನಿಂದ ಅವರೇನಾದರೋ ತಿಳಿಯಲಿಲ್ಲ. ಅವರು ಈ ಗುಡ್ಡದ ಬದಿಯಿಂದಾಗಿಯೇ ಹೋಗಬೇಕಿತ್ತು. ರಾಕ್ಷಸನು ಅವರನ್ನೆಲ್ಲ ಹಿಡಿದು ಗುಹೆಯೊಳಗೆ ಎಳೆದುಕೊಂಡು ಹೋಗಿ, ತಿಂದಿದ್ದಾನೆನ್ನಲು ಸಂದೇಹವೇನಿಲ್ಲ. ಈ ಸಂಗತಿ ತಿಳಿದು ಹೋತಯ್ಯನಿಗೆ ಬಂದ ಕೋಪಕ್ಕೆ ಇತಿಮಿತಿಯಿಲ್ಲ. ಇಷ್ಟು ದೊಡ್ಡ ಮೋಸಮಾಡಿದ ರಾಕ್ಷಸನನ್ನು ಸುಮ್ಮನೆ ಬಿಡಲಾರೆನೆಂದು ಶಪಥ ಹಾಕಿಕೊಂಡ. ಎಂತೆಂಥ ದರ್ಪದ ಪಿಶಾಚಿಗಳನ್ನಾದರೂ ಗಡಗಡ ನಡುಗಿಸುವವನು ಹೋತಯ್ಯ. ತನ್ನ ನಾಲ್ಕುಮಂದಿ ಶಿಷ್ಯರನ್ನೂ ತನ್ನ ಜತೆ ಕರೆದುಕೊಂಡು ಒಂದು ದಿನ ಗುಹೆಯೊಳಗೆ ಹೋದನು. ಅವರಾರೂ ಮತ್ತೆ ಹಿಂದಿರುಗಿ ಬರಲೇ ಇಲ್ಲ. ಅವರನ್ನೂ ಕೂಡಾ ಆ ರಾಕ್ಷಸ ಹೊಟ್ಟೆಯೊಳಗೆ ಹಾಕ್ಕೊಂಡಿರಲೇ ಬೇಕು. ಆ ಮೇಲೆ ಗ್ರಾಮಸ್ಥರೆಲ್ಲರೂ ಸಭೆ ಕೂಡಿ ಚರ್ಚೆ ಮಾಡಿದೆವು. ಕಡೆಗೆ ರಾಕ್ಷಸನಿಗೆ ದಿನಾ ಆಹಾರ ಕಳಿಸುತ್ತಾ, ದೇವರ ಮೇಲೆ ಭಾರ ಹಾಕಿಕೊಂಡಿರಲು ನಿಶ್ಚಯಿಸಿದ್ದೇವೆ" ಎಂದನು.

ಚಿನ್ನಪ್ಪನಿಗೆ ಈ ರಾಕ್ಷಸನ ಕಥೆ ಅನುಮಾನಾಸ್ಪದ ವಾಗಿಯೇ ಕಂಡಿತು. "ರಾಕ್ಷಸನು ಹೋತಯ್ಯ ನನ್ನೂ ಅವನ ಕಡೆಯ ಜನರನ್ನೂ ತಿಂದು ಮುಗಿಸಿದ ಮೇಲೆ, ಆ ರಾಕ್ಷಸನನ್ನು ಯಾರಾದರೂ ನೋಡಿ ದಿರಾ ?" ಎಂದು ಕೇಳಿದ ಚಿನ್ನಪ್ಪ.

"ಇಲ್ಲ. ಅವನೀಗ ನಮ್ಮ ಹಳೇ ಏರ್ಪಾಡಿಗೆ ಒಪ್ಪಿಕೊಂಡು ಗುಹೆಯೊಳಗೇ ಇದ್ದಾನೆ. ಇಲ್ಲದಿದ್ದರೆ ನಾವು ಈ ಗ್ರಾಮವನ್ನು ಎಂದೋ ಖಾಲಿಮಾಡಿ ಓಡಬೇಕಿತ್ತು." ಎಂದ ಆ ಮನುಷ್ಯ.

ಈ ಕಥೆಯಲ್ಲಿರುವ 'ರಾಕ್ಷಸ' ತೀರಾ ಸುಳ್ಳಿನ ರೂಪದವನೆಂದು ಚಿನ್ನಪ್ಪನಿಗೆ ಅನುಮಾನವಾಯಿತು. ಎಂದೋ ಯಾವನೋ ಒಬ್ಬ ಮಸಕು ಬೆಳುದಿಂಗಳಲ್ಲಿ ಗುಡ್ಡದ ಮೇಲೆ ನೋಡಿದನಂತೆ ತಾಳೇ ಮರದಂಥ ರಾಕ್ಷಸನನ್ನು. ಅಂಥವನು ಗುಹೆಯೊಳಗೆ ಮಖುರುಟ ಕೊಂಡು ಎಲ್ಲರನ್ನೂ ಹೆಬ್ಬಾವಿನ ಹಾಗೆ ನುಂಗುವು ದೆಂದರೇನು ? ನಾಲ್ಕು ಕುಟುಂಬಗಳ ಅಷ್ಟು ಮಂದಿ ಯನ್ನೂ ಒಮ್ಮೆಗೇ ತಿಂದು ಹಾಕಿದ ರಾಕ್ಷಸನು, ಆ ಮೇಲೆ ಬಹಳ ಬುದ್ಧಿವಂತನ ಹಾಗೆ ತಗ್ಗಿಕೊಂಡಿ ದ್ದಾನೆ. ಇದನ್ನೆಲ್ಲಾ ಹೇಗೆ ನಂಬುವುದು ? ಇಂಥಾ ರಾಕ್ಷಸನು ಕಲ್ಪಿತ ರೂಪದವನೇ ಆದರೆ ಆ ಸಂಗತಿ ಹೋತಯ್ಯನಿಗೆ ಗೊತ್ತೇ ಇದ್ದೀತು. ಏಕೆಂದರೆ ಅವನೇ ಅಲ್ಲವೇ ರಾಕ್ಷಸನೊಂದಿಗೆ ಒಪ್ಪಂದ ಮಾಡಿ ಕೊಂಡು ಬಂದ ಮಹಾಜಾಣ ? ರಾಕ್ಷಸನು ಸುಳ್ಳಾದರೆ ಹೋತಯ್ಯನೂ ಅವನ ಅನುಚರರೂ ಗುಹೆಯೊಳಗೇ ಇರುವರೆಂದಾಯಿತು. ಅವರ ಕುಟುಂಬಗಳು ಮೊದಲೇ ಗುಹೆಯೊಳಗೆ ಸೇರಿವೆ. ಅವರಿಗೋಸ್ಕರ ಆಹಾರವನ್ನು ಊರ ಜನರು ದಿನಾ ಸರದಿಯ ಮೇಲೆ ಕಳುಹಿಸುತ್ತಿದ್ದಾರೆ.

ತನ್ನ ಈ ಊಹೆ ನಿಜವೆಂಬ ನಂಬುಗೆಯಲ್ಲಿ ಚಿನ್ನಪ್ಪನು ತನ್ನ ಕರ್ತವ್ಯವನ್ನು ನಿರ್ಣಯಿಸಿಕೊಂಡು ತನ್ನ ನಾಯಿಯೊಂದಿಗೆ ಊರೊಳಗೆ ಬಂದನು.



ಆ ದಿನ ರಾತ್ರಿ ಅವನು ಕಗ್ಗತ್ತಲೆಯಲ್ಲಿ ಗುಡ್ಡದ ಬದಿಗೆ ಬಂದು ಗುಹೆಯ ಹೊರಗೆ ಕಿವಿಗೊಟ್ಟು ನಿಂತನು. ಗುಹೆಯೊಳಗೆ ಅನೇಕ ಮಂದಿ ಇರುವಂತೆ ಶಬ್ದ ಕೇಳುತ್ತಿದ್ದಿತು. ಒಳಕ್ಕೆ ಹಣಿಕಿ ಹಾಕಿ ಬೆಕ್ಕಿನಂತೆ ಮುಂದುವರಿದು ನೋಡಿದನು. ಕುರುಡು ದೀಪದ ಬೆಳಕಿನಲ್ಲಿ ಹೆಂಗುಸರು, ಗಂಡುಸರು, ಮಕ್ಕಳು ಸುಮಾರು ಹದಿನೈದು ಇಪ್ಪತ್ತು ಜನರು ಅದರೊಳ ಗಿರುವುದು ಅಸ್ಪಷ್ಟವಾಗಿ ತೋರಿತು. ಅವರೆಲ್ಲರೂ ಮಾಂಸವನ್ನು ಕಿತ್ತು ಕಿತ್ತು ತಿನ್ನುತ್ತಿದ್ದರು. ಬೇರೆ ರಾಕ್ಷಸನ ಜಾಡು ಯಾವುದೂ ಅಲ್ಲಿ ಕಾಣಲಿಲ್ಲ.

ಚಿನ್ನಪ್ಪ ಊರೊಳಗಿನ ಕೆಲವಂದಿ ಯುವಕರನ್ನು ಕರೆದು, "ನಾನು ನಿನ್ನೆ ರಾತ್ರಿ ನಿಮ್ಮನ್ನೆಲ್ಲಾ ಹೆಸರಿ ಸುವ ರಾಕ್ಷಸನ ಗುಹೆಯೊಳಗೆ ಹೋದೆ. ಅದರೊಳಗೆ ಅನೇಕ ಮಂದಿ ರಾಕ್ಷಸರಿರುವ ಮಾತು ನಿಜವೇ. ಆದರೆ ಅವರು ಭಯಂಕರ ಶಕ್ತಿಯುಳ್ಳ ರಾಕ್ಷಸರೇನಲ್ಲ. ಅಂತಹ ಅನೇಕ ಮಂದಿ ರಾಕ್ಷಸರ ಕಾಟವನ್ನು ನಾನು

ನಿಲ್ಲಿಸಿದ್ದೇನೆ. ಇವರಿಗಾಗಿ ನೀವೆಲ್ಲಾ ದಿನಾ ಸರದಿ ಮಾಡಿಕೊಂಡು ಆಹಾರ ಕಳುಹಿಸುವುದರಿಂದ ಏನೂ ಪ್ರಯೋಜನವಿಲ್ಲ. ಅದು ನಿಮ್ಮೆಲ್ಲರ ಬುದ್ಧಿ ಮಾಂದ್ಯ ವನ್ನೇ ತೋರಿಸುತ್ತದೆ" ಎಂದನು.

ಚಿನ್ನಪ್ಪನ ಮಾತು ಕೇಳಿ ಯುವಕರಿಗೆ ಏನೋ ಹೊಸ ಚೈತನ್ಯ ಬಂತು. ಅವರಿಗೆ ಇನ್ನೂ ಧೈರ್ಯ ಬರುವ ಹಾಗೆ ಚಿನ್ನಪ್ಪನು" ನಾನು ಹೇಳಿದ ಮೇಲೆ ಈ ಸಂಗತಿ ನಿಮಗೆ ಗೊತ್ತಾಗುವುದಕ್ಕಿಂತ ಮೊದಲೇ ತಿಳಿಯಬೇಕಿತ್ತು. ಒಂದುಸಾರಿ ಮನುಷ್ಯ ಮಾಂಸದ ರುಚಿ ನೋಡಿದ ರಾಕ್ಷಸನಾಗಲಿ, ಕಾಡುಮೃಗವಾಗಲಿ ಕೋಳಿ ಕುರಿಗಳಷ್ಟರಲ್ಲೇ ಸುಮ್ಮನಿದ್ದುಬಿಡುವುದಿಲ್ಲ. ಆದರೆ ಈ ಗುಹೆಯೊಳಗಿರುವ ರಾಕ್ಷಸರು ಗುಹೆಬಿಟ್ಟು ಹೊರಗೆ ಬರುವ ಹಾಗೆ ಮಾಡಲು ಏನೂ ಕಷ್ಟವಿಲ್ಲ. ನನ್ನ ಜತೆ ಬನ್ನಿರಿ. ಗುಹೆಯ ಬಾಯಿಯ ಹತ್ತಿರ ಒಂದು ಸಣ್ಣ ಕೆಲಸ ಮಾಡಿದರೆ ಸಾಕು. ಒಣಗಿದ ಕಟ್ಟಿಗೆಗಳನ್ನೂ ದರಲೆಗಳನ್ನೂ ಗುಹೆಯ ದ್ವಾರದಲ್ಲಿ ಪೇರಿಸಿ ಬೆಂಕಿ ಹಚ್ಚಿಬಿಟ್ಟರೆ ಸರಿ. ಒಳಗಿರುವ ರಾಕ್ಷಸ ರೆಲ್ಲ ಹೊರಗೆ ಬರುತ್ತಾರೆ. ನಿಮಗೆಲ್ಲಾ ದ್ರೋಹ ಮಾಡಿದ ಆ ರಾಕ್ಷಸರಿಗೆ ಚೆನ್ನಾಗಿ ದೇಹಶುದ್ಧಿ ಮಾಡಿ ಬಿಡೋಣ" ಎಂದನು.

ಚಿನ್ನಪ್ಪ ಹೇಳಿದ ಹಾಗೆಯೇ ಎಲ್ಲರೂ ಸೇರಿ ಮಾಡಲು ಮುಂದಾದರು. ಗುಡ್ಡದ ಗುಹೆಯ ಬಾಯಿಯಲ್ಲಿ ತುಂಬಾ ಒಣಗಿದ ಕೊಂಬೆ ರೆಂಬೆ ದರಲೆ ಕಟ್ಟಿಗೆಗಳನ್ನು ಒಟ್ಟಿ, ಬೆಂಕಿ ಹಚ್ಚಿದರು.

ಒಳಗಿರುವವರಿಗೆ ಹೊಗೆಯಿಂದಲೂ ಉಷ್ಣ ದಿಂದಲೂ ಉಸಿರಾಡಿಸಲು ಸಾಧ್ಯವಾಗದೆ, ಉರಿ ಯುವ ಕಟ್ಟಿಗೆಗಳನ್ನು ದೂಡುತ್ತಾ ಬಡಬಡನೆ ಹೊರಗೆ ಬಂದು ಬಿದ್ದರು. ಯಾವುದೋ ಹೊಸ ಬಗೆಯ ರಾಕ್ಷಸರು ಬರುತ್ತಾರೆಂದು ಎದುರು ನೋಡುತ್ತಿದ್ದ ಗ್ರಾಮಸ್ಥರು ಹೋತಯ್ಯನನ್ನೂ, ಅವನ ಕಡೆಯ ಜನರನ್ನೂ, ಹೆಂಗುಸರನ್ನೂ ಮಕ್ಕ ಳನ್ನೂ ನೋಡಿ ಆಶ್ಚರ್ಯದಿಂದ ಸ್ತಬ್ಧರಾದರು.

"ನೋಡಿದಿರಾ ! ಇವರೆಲ್ಲಾ ನಿಮಗೆ ತಿಳಿದಿರುವ ರಾಕ್ಷಸರೇ. ಯಾವಾಗಲೋ ಒಬ್ಬ ರಾಕ್ಷಸ ಇಲ್ಲಿಗೆ ಬಂದನೆಂಬ ಕಥೆಯನ್ನು ಆಧಾರ ಮಾಡಿಕೊಂಡು, ಇವರು ಊರ ಜನರನ್ನು ಈ ವಿಧವಾಗಿ ದೋಚುತ್ತ ಸುಖವಾಗಿ ಹೊಟ್ಟೆ ತುಂಬುವ ಉಪಾಯ ಮಾಡಿ ದ್ದಾರೆ." ಎಂದ ಚಿನ್ನಪ್ಪ.

ಹೋತಯ್ಯನಿಗೂ ಅವನ ಅನುಚರರಿಗೂ ಇನ್ನು ತಮ್ಮ ಗ್ರಾಮಸ್ಥರ ಇದಿರಿನಲ್ಲಿ ಮುಖ ತೋರಿಸಿ ಕೊಂಡಿರಲು ಸಾಧ್ಯವಾಗದೆ, ತಮ್ಮ ಕುಟುಂಬ ಗಳೊಂದಿಗೆ ಎಲ್ಲಿಗೋ ಹೊರಟುಹೋದರು.

ಆ ಮೇಲೆ ಚಿನ್ನಪ್ಪನು ಊರವರಿಂದ ಅಪ್ಪಣೆ ಪಡೆದು, ಇನ್ನೊಂದು ಊರಿಗೆ ಹೊರಟನು.



# ವ್ಯತ್ಯಾಸ

ವಿಜಯನಗರದ ಮಹಾಮಂತ್ರಿ ತಿಮ್ಮರಸನ ಮನೆಯಲ್ಲಿ ಇಬ್ಬರು ಸೇವಕರು ಕೆಲಸ ನೋಡಿಕೊಳ್ಳುತ್ತಿದ್ದರು. ಇಬ್ಬರೂ ವಿಶ್ವಾಸ ಪಾತ್ರರಾದವರು.

ತಿಮ್ಮರಸನು ಇಬ್ಬರಿಗೂ ಪ್ರತಿ ವರ್ಷವೂ ಇಪ್ಪತ್ತು ವರಹಗಳನ್ನು ಸಂಬಳದಲ್ಲಿ ಹೆಚ್ಚಿಸುತ್ತಿದ್ದನು. ಇಬ್ಬರಲ್ಲಿ ಯಾವ ತಾರತಮ್ಯವೂ ಇರದೆ, ಇಬ್ಬರೂ ಒಂದೇ ತರಗತಿಯವರು.

ಒಂದು ವರ್ಷ ತಿಮ್ಮರಸು ಒಬ್ಬನಿಗೆ ಮಾತ್ರ ಕ್ರಮದಂತೆ ಇಪ್ಪತ್ತು ವರಹಗಳನ್ನು ಹೆಚ್ಚಿಸಿ, ಎರಡನೆಯವನಿಗೆ ನಲುವತ್ತು ವರಹ ಹೆಚ್ಚಿಸಿ ಕೊಟ್ಟನು.

ಮೊದಲನೆಯವನು ಏನೂ ಹೇಳದಿದ್ದರೂ, ಹೆಚ್ಚಿಗೆ ಸಂಬಳ ಪಡೆದ ಎರಡನೆಯವನು, ಈ ವ್ಯತ್ಯಾಸಕ್ಕೆ ಕಾರಣವೇನೆಂದು ತಿಮ್ಮರಸನನ್ನು ಕೇಳಿದನು.

"ನಿನಗೆ ಪರೋಪಕಾರ ಬುದ್ಧಿಯಿದೆ. ಅವನಲ್ಲಿಲ್ಲ" ಎಂದ ತಿಮ್ಮರಸು.

"ಅದು ತಮಗೆ ಹೇಗೆ ಗೊತ್ತಾಯಿತೋ ?" ಎಂದು ಕೇಳಿದ ಸೇವಕ.

"ನಿನ್ನೆ ರಾತ್ರಿ ಒಬ್ಬ ಭಿಕ್ಷುಕ ಅವನ ಮನೆಗೆ ಹೋಗಿ ಒಂದು ಮುಷ್ಟಿ ಅನ್ನ ಬೇಡಿದ. ಅವನು ಬೈದು ಕಳಿಸಿಬಿಟ್ಟ. ಆ ಮೇಲೆ ಅವನು ನಿನ್ನ ಮನೆಗೆ ಬಂದಾಗ, ನೀನು ಅವನಿಗೆ ಹೊಟ್ಟೆ ತುಂಬ ಊಟ ಹಾಕಿ, ಹಳೇ ಬಟ್ಟೆ ಕೂಡಾ ಕೊಟ್ಟೆ. ಆದ್ದರಿಂದ ನಿನಗೆ ಹೆಚ್ಚಿಸಿದ ಸಂಬಳ ದಾನ ಧರ್ಮಗಳಿಗೆ ಉಪಯೋಗ ಬೀಳುತ್ತದೆ" ಎಂದ ತಿಮ್ಮರಸು.

"ಹೌದು, ನಿಜ, ಇದು ನಿಮಗೆ ಹೇಗೆ ಗೊತ್ತಾಯಿತಪ್ಪ ?" ಎಂದ ಸೇವಕ ಆಶ್ಚರ್ಯದಿಂದ.

"ಆ ಭಿಕ್ಷುಕ ನಾನೇ !" ಎಂದ ತಿಮ್ಮರಸು.





# ಕಾಣದ ಕಳ್ಳರು

ಹಿಂದೆ ಒಂದು ಕಾಲದಲ್ಲಿ ವಿದರ್ಭ ದೇಶದ ಪಶ್ಚಿಮ ಪ್ರಾಂತದ ಮೇಲೆ ಅತಿವೃಷ್ಟಿ ಯುಂಟಾಯಿತು. ಅದ ರಿಂದ ಭಾರೀ ನೆರೆ ಬಂದು ಗ್ರಾಮಗಳನೇಕ ಮುಳು ಗಿದುವು. ತುಂಬ ಜನನಷ್ಟವೂ ಆಯಿತು. ಇದನ್ನು ತಿಳಿದು ಆ ದೇಶದ ರಾಜನು ಜೀವಣ್ಣ ಎಂಬವನ ಮೂಲಕ ತುಂಬಾ ಧನವನ್ನು ಕೊಟ್ಟು ನೆರೆಪೀಡಿತ ಪ್ರಾಂತಗಳಿಗೆ ಕಳುಹಿಸಿದನು.

ಜೀವಣ್ಣ ಹೋಗುವ ದಾರಿಯಲ್ಲಿ ಬೆಟ್ಟಗಳ ಪ್ರದೇಶವು ಬಂದಿತು. ಅಲ್ಲಿ ಸಿದ್ಲಿಂಗ ಎಂಬವನು ಜೀವಣ್ಣನ ಕಣ್ಣಿಗೆ ಬಿದ್ದನು.

ಈ ಸಿದ್ಲಿಂಗನೆಂದರೆ ದೊಡ್ಡ ಕಳ್ಳ. ಕಳ್ಳತನವೇ ಅವನ ವೃತ್ತಿ. ಹಿಂದೆ ಒಂದುಸಾರಿ ಸಿಕ್ಕಿಬಿದ್ದು ಕೆಲವು ವರ್ಷ ಕಾರಾಗೃಹವಾಸದ ಶಿಕ್ಷೆ ಅನುಭವಿಸಿದ್ದನು. ಆ ಸಮಯದಲ್ಲಿ ಜೀವಣ್ಣ ಕಾರಾಗೃಹದಲ್ಲಿದ್ದ ಸಿದ್ಲಿಂಗನಿಗೆ ರಹಸ್ಯವಾಗಿ ಕೆಲವು ಸೌಕರ್ಯಗಳನ್ನು ಮಾಡಿ ಕೊಟ್ಟಿದ್ದನು.

ಆದುದರಿಂದ ಸಿದ್ಲಿಂಗ ಜೀವಣ್ಣನನ್ನು ನೋಡಿ ಕೈಮುಗಿದು, ಆದಿನ ತನ್ನ ಮನೆಗೆ ಅತಿಥಿಯಾಗಿ ಬರಬೇಕೆಂದು ಕೇಳಿಕೊಂಡನು. ಜೀವಣ್ಣ ಒಪ್ಪಿ ಕೊಂಡು ಅವನ ಮನೆಗೆ ಹೋದನು. ನಿರ್ಜನ ಪ್ರಾಂತದಲ್ಲಿ ಸಿದ್ಲಿಂಗನ ಮನೆ ಇದ್ದಿತು. ಅದೊಂದು ಕುಗ್ರಾಮವಾದರೂ ಸಿದ್ಲಿಂಗ ಜೀವಣ್ಣನಿಗೆ ಒಳ್ಳೆಯ ಆತಿಥ್ಯವನ್ನೇ ಕೊಟ್ಟನು. ತಾನು ಕಳ್ಳನಾದರೂ ಸೆರೆ ಮನೆಯಲ್ಲಿ ಕಷ್ಟಪಡದಂತೆ ತನ್ನನ್ನು ನೋಡಿ ಕೊಂಡವನೆಂಬ ಕೃತಜ್ಞತೆ ಅವನಲ್ಲಿದ್ದುದನ್ನು ನೋಡಿ ಜೀವಣ್ಣ ಮೆಚ್ಚಿದ.

ಸಿದ್ಲಿಂಗನನ್ನು ನೋಡಿದ ಕೂಡಲೇ ಜೀವಣ್ಣನಲ್ಲಿ ಒಂದು ಲಾಭದಾಯಕವಾದ ಆಲೋಚನೆ ಬಂದಿತ್ತು. ಸಿದ್ಲಿಂಗನು ತಾನು ಹೇಳಿದ ಹಾಗೆ ಕೇಳಿಬಿಟ್ಟರೆ, ತನ್ನ ಕೈಯಲ್ಲಿರುವ ಈ ರಾಜ ಧನವಷ್ಟೂ ತನ್ನದಾಗಿ ಬಿಡುತ್ತದೆ.

ಸಿದ್ಲಿಂಗನಿಗೆ ಚುಳ್ಕಿ ಎಂಬ ಮಗಳಿದ್ದಳು. ಜೀವಣ್ಣ ನಿಗೆ ಅಡಿಗೆ ಮಾಡಿ ಬಡಿಸಿದವಳು ಅವಳೇ. ಅವಳ ಮೂಲಕ ತನ್ನ ಕಾರ್ಯ ಸಾಧಿಸಬಹುದೆಂದುಕೊಂಡು ಜೀವಣ್ಣ ತನ್ನ ಆಲೋಚನೆಯನ್ನು ಸಿದ್ಲಿಂಗನಿಗೆ ಹೇಳಿ, "ಸಿದ್ಲಿಂಗಾ, ನಾನು ನಿನ್ನ ಮಗಳನ್ನು ಮದುವೆ ಮಾಡಿಕೊಳ್ಳುವುದು ಅಂತ ಆಲೋಚಿಸಿದ್ದೇನೆ. ಆ ಕಾರಣದಿಂದ ನೀನು ಸಾಧ್ಯವಾದಷ್ಟು ಬೇಗದಲ್ಲಿ

ಸಿ. ರಾಜೇಶ್ವರರಾವ್

ಕಾರಾಗೃಹದಿಂದ ಹೊರಗೆ ಬರುವ ಹಾಗೆ ಮಾಡಿ ಬಿಡುತ್ತೇನೆ. ಇದರಿಂದ ನಿನಗೂ ಕನ್ಯಾಪಿತನ ಭಾರ ಕಳೆದು ಒಳ್ಳೆಯ ಸಂಬಂಧ ಸಿಕ್ಕಿದ ಹಾಗಾಗುತ್ತೆ. ನನಗೂ ಲಾಭ. ಏನನ್ನುವೆ ?" ಎಂದನು.

ಜೀವಣ್ಣನ ಆಲೋಚನೆಗೆ ಸಿದ್ಲಿಂಗನು ಒಪ್ಪಿ ಕೊಂಡು ಅವನು ಹೇಳಿದಂತೆ ಮಾಡಲು ಸಿದ್ಧನಾದನು. ಜೀವಣ್ಣ ತನ್ನ ಬಟ್ಟೆಗಳನ್ನು ಹರಿದು, ಶರೀರದಲ್ಲಿ ಅಲ್ಲಲ್ಲಿ ಚಿಕ್ಕ ಚಿಕ್ಕ ಗಾಯಗಳನ್ನು ಮಾಡಿಕೊಂಡು, ಮಹಾರಾಜನಬಳಿಗೆ ಹೋಗಿ, ಬೆಟ್ಟದ ಪ್ರಾಂತದಲ್ಲಿ ಸಿದ್ಲಿಂಗನೆಂಬ ಆ ಕಳ್ಳ ತನ್ನ ಗುಂಪಿನೊಂದಿಗೆ ಬಿದ್ದು, ನನ್ನನ್ನು ಹೊಡೆದು ಇರುವ ಧನವಷ್ಟೂ ದೋಚಿ ಕೊಂಡು ಹೋದನೆಂದು ದೂರು ಹೇಳಿದನು.

ರಾಜನು ಕೂಡಲೇ ಭಟರನ್ನು ಕಳುಹಿಸಿ, ಸಿದ್ಲಿಂಗ ನನ್ನು ಹಿಡಿಸಿ ತರಿಸಿದನು. ಆ ಸಮಯದಲ್ಲಿ ಸಿದ್ಲಿಂಗ ರಾಜಭಟರಿಂದ ತಪ್ಪಿಸಿಕೊಳ್ಳಲು ಏನೂ ಪ್ರಯತ್ನ ಮಾಡಲಿಲ್ಲ. ತನ್ನನ್ನು ಹಿಡಿಯಲು ಬಂದ ರಾಜ ಭಟರನ್ನು ನೋಡಿ ಆಶ್ಚರ್ಯ ಪಡಲೂ ಇಲ್ಲ, ಪ್ರತಿ ಭಟನೆ ತೋರಿಸಲೂ ಇಲ್ಲ. ಅವನು ಅಷ್ಟೊಂದು ಸುಲಭವಾಗಿ ಸಿಕ್ಕಿ ಬಿದ್ದುದನ್ನು ನೋಡಿ ರಾಜನಿಗೆ ಬಹಳ ಆಶ್ಚರ್ಯವಾಯಿತು. ಸಿದ್ಲಿಂಗ ಇತ್ತೀಚೆಗೆ ಬಹಳ ಹಣ ಸಂಪಾದಿಸಿಕೊಂಡವನಂತೆಯೂ ಇರ ಲಿಲ್ಲ. ತನ್ನ ಕೈಕೆಳಗೆ ದೊಡ್ಡದೊಂದು ಗುಂಪು ಇಟ್ಟು ಕೊಂಡಿರುವವನಂತೆಯೂ ಕಾಣಲಿಲ್ಲ. ಏನಾದರೂ ರಾಜನು ಅವನನ್ನು ವಿಚಾರಣೆಗೆ ಗುರಿಪಡಿಸಿ ರಾಜ ದ್ರೋಹವು ಬೆರೆತ ಈ ಕಳ್ಳ ತನಕ್ಕೆ ಅವನಿಗೆ ಗಲ್ಲಿನ ಶಿಕ್ಷೆ ಕೂಡಾ ವಿಧಿಸಿಬಿಟ್ಟನು.

ಕಳ್ಳ ಸಿದ್ಲಿಂಗನಿಗೆ ಗಲ್ಲಿನಶಿಕ್ಷೆ ಬಿದ್ದ ಸಂಗತಿ ಕೇಳಿ ಜೀವಣ್ಣನಿಗೆ ದೊಡ್ಡದೊಂದು ಭಾರ ಕಳಗಿಳಿದಂತೆ ಸಮಾಧಾನವೆನಿಸಿತು. ಸಿದ್ಲಿಂಗನ ಮಗಳನ್ನು ಮದುವೆಯಾಗುವ ಇಚ್ಛೆ ಅವನಿಗೆ ಸ್ವಲ್ಪವೂ ಇರ ಲಿಲ್ಲ. ಅಂತೆಯೇ ತನ್ನನ್ನು ನೋಡಲು ಬಂದ ಚುಕ್ಕಿ ಯನ್ನು ನೌಕರರ ಮೂಲಕ ಹೊರಗೆ ದೂಡಿಸಿ ಬಿಟ್ಟನು. ಆ ಮೇಲೆ ಅವನು ನಿಶ್ಚಿಂತನಾಗಿ ಈ ಮೊದಲೇ ಅಂದುಕೊಂಡಿದ್ದ ಒಬ್ಬ ಶ್ರೀಮಂತನ



ಮಗಳನ್ನು ಮದುವೆಯಾಗಲು ಏರ್ಪಾಡು ಮಾಡುತ್ತ ಆ ಕಾರ್ಯದಲ್ಲಿ ಮಗ್ನನಾಗಿದ್ದನು.

ಅವನು ಹಾಗೆ ಮನಸ್ಸಿನಲ್ಲಿ ಮಂಡಿಗೆ ಸವಿದು ಕೊಂಡಿದ್ದಾಗ ಅವನಿದಿರಿನಲ್ಲಿ ಆಕಸ್ಮಾತ್ತಾಗಿ ಸಿದ್ಲಿಂಗ ಬಂದುನಿಂತನು. "ಏನಯ್ಯಾ ಜೀವಣ್ಣಾ! ನನಗೆ ಇಷ್ಟು ದೊಡ್ಡ ದ್ರೋಹ ಮಾಡುವೆಯಾ? ನನ್ನ ಮಗಳನ್ನು ನೌಕರರಿಂದ ದೂಡಿಸುವಷ್ಟು ಧೈರ್ಯವೇ ನಿನಗೆ? ನಿನಗೆ ತಕ್ಕ ಶಾಸ್ತಿ ಮಾಡದೆ ಬಿಡುವನೆಂದು ಕೊಂಡೆಯಾ ಈ ಸಿದ್ಲಿಂಗ?" ಎಂದು ಗುಡುಗಿದ ಕಳ್ಳ ಸಿದ್ಲಿಂಗ.

ಜೀವಣ್ಣ ಗಾಬರಿಬಿದ್ದು, ಕೂಡಲೇ ಧೂರ್ತ ತನದಿಂದ ಸಮಾಳಿಸಿಕೊಂಡು, "ತಪ್ಪು ತಿಳಿಯಬೇಡಪ್ಪಾ. ಈ ಮದುವೇ ಪ್ರಯತ್ನವೆಲ್ಲಾ ನಿನ್ನ ಮಗಳನ್ನು ಮದುವೆಯಾಗಲಿಕ್ಕೇ. ಅದಿರಲಿ, ಈಗ ನೀನು ಹೇಗೆ ತಪ್ಪಿಸಿಕೊಂಡುಬಂದೆ?" ಎಂದು ಕೇಳಿದ.

"ಈ ಮುದುಕನ ಸಹಾಯದಿಂದ ತಪ್ಪಿಸಿಕೊಂಡು ಬಂದೆ" ಎಂದು ಸಿದ್ಲಿಂಗ ತನ್ನ ಹಿಂದೆ ನಿಂತಿದ್ದ ಮುದುಕನನ್ನು ತೋರಿಸಿ, "ನಾನು ನಿನ್ನ ಮಾತನ್ನು ನಂಬುವುದಿಲ್ಲ. ನನ್ನ ಭಾಗದ ಹಣ ನನಗೆ ಕೊಟ್ಟು ಬಿಡು. ನನ್ನ ಪಾಡಿಗೆ ಹೋಗಿಬಿಡುತ್ತೇನೆ" ಎಂದನು.

"ಅದೇನು ಒಪ್ಪಂದ ನಿಮ್ಮಿಬ್ಬರೊಳಗೆ?" ಎಂದು ಮುದುಕನು ಪ್ರಶ್ನೆ ಮಾಡಿದನು. ಆಗ ಜೀವಣ್ಣನು ತನ್ನ ಒಪ್ಪಂದದ ಸಂಗತಿಯನ್ನು ಹೇಳಿ, "ನಾನು ಚುಕ್ಕಿಯನ್ನೇ ಮದುವೆಯಾಗುತ್ತೇನೆ. ಅವಳ ಮೇಲೆ ತೋರಿಸಿದ ಕೋಪಕ್ಕೆ ನನ್ನನ್ನು ಕ್ಷಮಿಸಿ ಬಿಡಿ. ಅದಾವುದೋ ವಿಷಗಳಿಗೆ" ಎಂದನು.

ಕೂಡಲೇ ಮುದುಕನು ಜೀವಣ್ಣನ ಕೈಗಳಿಗೆ ಸಂಕಲೆ ತಗಲಿಸಿ, ತನ್ನ ವೇಷವನ್ನು ತೆಗೆದು ಸಾಕ್ಷಾತ್ ಮಹಾರಾಜನಾಗಿ ನಿಂತನು.

ಜೀವಣ್ಣನು ದಿಗ್ಭ್ರಾಂತನಾದನು. ಅವನ ನಾಲಗೆಯ ಪಸೆ ಜರ್ರನೆ ಆರಿತು. ಮಹಾರಾಜನು ಹೀಗೆಂದನು:

"ದೊಡ್ಡ ಕಳ್ಳನಾದ ಸಿದ್ಲಿಂಗನಂಥವನು ಅಷ್ಟು ಸುಲಭವಾಗಿ ಸಿಕ್ಕಿಬಿದ್ದುದನ್ನು ನೋಡಿ ನನಗೆ ಅನುಮಾನವಾಯಿತು. ಅದರಲ್ಲಿ ನಿನ್ನ ಪಾತ್ರವೂ ಇರಬಹುದೆಂಬ ಸಂದೇಹವೂ ಆಯಿತು. ಸಿದ್ಲಿಂಗನಿಗೆ ಗಲ್ಲಿನ ಶಿಕ್ಷೆ ವಿಧಿಸಿದ ಕೂಡಲೇ, ಅವನು ನಡೆದ ಸತ್ಯ ಸಂಗತಿಯನ್ನೆಲ್ಲಾ ಹೇಳಿಬಿಟ್ಟ. ಅವನು ಹೇಳಿದುದೆಲ್ಲಾ ನಿಜವೆಂದು ನಿನ್ನ ಬಾಯಿಯಿಂದಲೇ ಹೇಳಿದೆಯಷ್ಟೆ? ಸಿದ್ಲಿಂಗನಂಥ ಕಳ್ಳರಿಗಿಂತಲೂ ನಿನ್ನಂಥ ಕಾಣದ ಕಳ್ಳರು ಅಪಾಯಕಾರಿಗಳು. ನಿನ್ನಂಥವರನ್ನು ಕಿತ್ತು ಬಿಸುಟ ಹೊರತು ರಾಜ್ಯಕ್ಕೆ ಕ್ಷೇಮವಿಲ್ಲ. ಈಗ ಕಾರಾಗೃಹದಲ್ಲಿ ಬೀಳು." ಜೀವಣ್ಣ ಏನೂ ಹೇಳದೆ ಕೇವಲ ನಡೆ ಬೊಂಬೆಯಂತಾದನು.





# ರಕ್ಷಕಭಟರಂಗಪ್ಪ

ಅನೇಕ ವರ್ಷಗಳ ಹಿಂದೆ ರಂಗಪ್ಪನೆಂಬವನು ರಕ್ಷಕ ಭಟನಾಗಿ ಸೇವೆ ಮಾಡಿಕೊಂಡಿದ್ದ. ಮೊದ ಮೊದಲು ಚುರುಕಾಗಿ ಕೆಲಸ ಮಾಡಿಕೊಂಡಿದ್ದ ಅವನಿಗೆ ಬರ ಬರುತ್ತ ಶರೀರವು ತುಂಬ ದಪ್ಪವಾಗಿಬಿಟ್ಟಿತು. ಚುರುಕುತನ ಮುರುಟಿತು.

ಅವನ ಕೆಲಸ ರಾತ್ರಿಯಲ್ಲಿ ಗಸ್ತು ತಿರುಗುವುದು. ಸಾವಧಾನವಾಗಿ ತಿರುಗುತ್ತಿರುವನೇ ಹೊರತು ಓಡಿ ಹೋಗಿ ಕಳ್ಳನನ್ನು ಹಿಡಿಯುವ ಲಾಘವತೆ ಈಗ ಅವನಿಗಿರಲಿಲ್ಲ.

"ರಂಗಪ್ಪಾ, ಇತ್ತೀಚೆಗೆ ನೀನು ಯಾವ ಬಗೆಯ ತಪ್ಪುಗಾರನನ್ನೂ ಹಿಡಿದಿಲ್ಲವಲ್ಲಾ?" ಎಂದು ಮೇಲಿನ ಅಧಿಕಾರಿ ಕೇಳಿದರೆ, "ನನ್ನನ್ನು ನೋಡಿದರೇನೇ ತಪ್ಪುಗಾರರಿಗೆ ಕರುಳು ನಡುಗುತ್ತೆ ಸ್ವಾಮಿ· ಆದ್ದರಿಂದಲೇ ಈಗ ಅಪರಾಧಿಗಳು ಕಡಮೆಯಾಗಿದ್ದಾರೆ" ಎಂದು ಎದೆಯುಬ್ಬಿಸಿ ಉತ್ತರ ಕೊಡುತ್ತಿದ್ದನು.

ಆದರೆ ಪ್ರಜೆಗಳ ಕಡೆಯಿಂದ ಫಿರ್ಯಾದಿಗಳು ಬರುತ್ತಲೇ ಇದ್ದುವು. ರಂಗಪ್ಪ ಮೇಲಧಿಕಾರಿಯಿಂದ ಬೈಗುಳು ತಿನ್ನುತ್ತಲೇ ಇದ್ದಾನೆ. ಹೇಗಾದರೂ ಒಬ್ಬ ತಪ್ಪುಗಾರನನ್ನು ಹಿಡಿದು ಮೇಲಧಿಕಾರಿಯ ಮೆಚ್ಚುಗೆ ಪಡೆಯಬೇಕೆಂದು ರಂಗಪ್ಪ ಆಲೋಚಿಸಿಕೊಂಡಿದ್ದನು.

ಅಪರಾಧಿಗಳನ್ನು ಹಿಡಿಯುವುದರಿಂದ ರಂಗಪ್ಪನಿಗೆ ಇನ್ನೊಂದು ವಿಧವಾದ ಲಾಭವೂ ಇದೆ. ಅವನು ಬರಲಿರುವ ದೀಪಾವಳಿ ಹಬ್ಬದ ಸಮಯಕ್ಕೆ ಹೆಂಡತಿಗೆ ಚಂದ್ರಹಾರ ಮಾಡಿಸಿ ಕೊಡುವುದಾಗಿ ಮಾತು ಕೊಟ್ಟು, ಅದಕ್ಕಾಗಿ ಮುನ್ನೂರು ರೂಪಾಯಿ ಕೂಡಿಸಿಟಿದ್ದನು.

ಯಾವನಾದರೊಬ್ಬ ಕಳ್ಳನೋ ಸುಳ್ಳನೋ ತನ್ನ ಕೈಗೆ ಸಿಕ್ಕಿ, ಇನ್ನೂರು ರೂಪಾಯಿಗಳಿಂದ ತನ್ನ ಎರಡು ಕೈಗಳನ್ನೂ ಬಿಸಿ ಮಾಡಿದನೆಂದರೆ, ತನ್ನ ಹೆಂಡತಿಗೆ ಚಂದ್ರಹಾರ ತಯಾರಾಗಿ ಬಿಡುತ್ತದೆ.

ತಲೆಯೊಳಗೆ ಆಲೋಚನೆಯನ್ನು ತಿರುಗ ಹಾಕಿಕೊಂಡು, ಕೈಯಲ್ಲಿ ದಂಡವನ್ನಾಡಿಸಿಕೊಳ್ಳುವ ರಂಗಪ್ಪ ಗಸ್ತು ತಿರುಗುತ್ತ, ಶಿವಾಲಯದ ಹತ್ತಿರ ಬಂದನು. ಕತ್ತಲೆಯಲ್ಲಿ ಶಿವಾಲಯದ ಜಗಲಿಯ ಮೇಲೆ ಯಾವನೋ ಅಡಗಿ ಕುಳಿತುಕೊಳ್ಳಲು ಚಲಿಸುವುದನ್ನು ನೋಡಿದನು. "ಯಾವನೋ ಅದು?" ಎಂದು ರಂಗಪ್ಪ ಗದರಿಸಿ ಕೇಳಿದನು.

ಎಂ. ಕೆ. ಈಶ್ವರರಾವ್



ಎತ್ತಾದರೂ ಓಡಪ್ಪ' ಎಂದಳು. ಅಪ್ಪ ಕೋಣೇ ವೊಳಗೆ ಕತ್ತಿ ಮಸೀತಾ ಇದ್ರು. ನಾನು ಶಬ್ದ ಮಾಡದೆ ಓಡಿ ಬಂದು ಇಲ್ಲಿ ಕೂತುಕೊಂಡೆ" ಎಂದ ಹುಡುಗ.

ರಂಗಪ್ಪನಿಗೆ ತನ್ನ ಕರ್ತವ್ಯದ ಜ್ಞಾಪಕ ಬಂತು. ಒಬ್ಬ ಕೊಲೆಗಾರನ ಕೈಯಲ್ಲಿ ಅನ್ಯಾಯವಾಗಿ ಹೆಣ ಬೀಳುವುದರೊಳಗೇ ತಾನು ಹೋಗಿ ರಕ್ಷಿಸಿಬಿಟ್ಟರೆ ಜತೆಗೆ ಪುಣ್ಯವೂ ಬರುತ್ತದೆ.

ರಂಗಪ್ಪ ಆ ಹುಡುಗನಿಗೆ ಧೈರ್ಯ ಹೇಳಿ, ಅವನನ್ನು ಮುಂದಿಟ್ಟುಕೊಂಡು ಅವನ ಮನೆಗೆ ಹೊರಟನು. ಕಳ್ಳನನ್ನು ಕಳ್ಳತನ ಮಾಡುವಾಗ ಹಿಡಿಯಬೇಕು, ಹಂತಕನನ್ನು ಹತ್ಯವಾಗುವವೊದಲೇ ಹಿಡಿಯಬೇಕು. ಅದೇ ರಕ್ಷಕಭಟರ ಜಾಣ ತನ.

"ನಾವು ಗುಟ್ಟಾಗಿ ಒಳಗೆ ಹೋಗಬೇಕು" ಎಂದ ರಂಗಪ್ಪ. ಹುಡುಗ ಮನೆ ಹಿಂದಿನ ಗೋಡೆಯನ್ನು ಚಂಗನೆ ಹಾರಿ ಆಚೆಗೆ ಧುಮುಕಿದನು. ರಂಗಪ್ಪ ಬಹು ಕಷ್ಟದಿಂದ ಆ ಗೋಡೇ ಮೇಲೆ ಹತ್ತಿದ ಕೂಡಲೇ ಮಳೆಯಿಂದ ನೆನೆದ ಆ ಹಳೆಯ ಮಣ್ಣಿನ ಗೋಡೆಗೆ ಅವನ ಭಾರವನ್ನು ತಾಳಲಾಗದೆ, ಅಷ್ಟ ಗಲಕ್ಕೆ ಒಡೆದುಬಿತ್ತು. ರಂಗಪ್ಪನಿಗೆ ಸೊಂಟ ಮುರಿದಂತಾಗಿ, ಹೇಗೋ ಅವಸರವಸರದಲ್ಲಿ ಸುಧಾರಿಸಿಕೊಂಡು ಎದ್ದ.

ಮನೆಯೊಳಗೆ ಏನೋ ಕೆಟ್ಟ ಶಬ್ದ. "ಕೊಲ್ಲಬೇಡಿ ಕೊಲ್ಲಬೇಡಿ!" ಎಂಬ ಕೂಗು. ಕೊಲೆಗಾರನನ್ನು ಹಿಡಿಯಲಿರುವ ಉತ್ಸಾಹದಲ್ಲಿ ರಂಗಪ್ಪ ಹಾರಿ ಕುಪ್ಪಳಿಸಿಕೊಂಡು ಬಂದು ಹಿಂದಿನ ಬಾಗಿಲನ್ನು ದೂಡಿದನು. ಬಾಗಿಲಿಗೆ ಒಳಗಿನಿಂದ ತಾಳ ಹಾಕಿದ್ದಿತು. ರಂಗಪ್ಪ ಬಲವಾಗಿ ಒದ್ದ ಕೂಡಲೇ ಹಳೆಯ ಬಾಗಿಲು ಚಟಪಟನೆ ಒಡೆದು ಒಳಬದಿಗೆ ಬಿದ್ದುಹೋಯಿತು.

ಆತ್ಯಾತುರದಿಂದ ಒಳಗೆ ನುಗ್ಗಿದ ರಂಗಪ್ಪ ಅಲ್ಲಿಯ ದೃಶ್ಯ ನೋಡಿ ಸ್ತಂಭೀಭೂತನಾದ. ಹುಡುಗನ

ತನ್ನನ್ನು ನೋಡಿ ಅಡಗಿಕೊಳ್ಳುವವನು ನಿಜಕ್ಕೂ ದೊಡ್ಡ ಕಳ್ಳನೇ ಎಂದು ಮಿಂಚಿತ್ತು ರಂಗಪ್ಪನಿಗೆ.

ಹದಿನೇಳು ವಯಸ್ಸಿನ ಹುಡುಗನೊಬ್ಬ ಭಯ ಪಡುತ್ತ ರಂಗಪ್ಪನ ಹತ್ತಿರ ಬಂದ. ರಂಗಪ್ಪ ಅವನ ಹಿಂಗತ್ತನ್ನು ಹಿಡಿದು, "ಯಾರೋ ನೀನು? ಕಳ್ಳನ ಹಾಗಿದ್ದೀಯಾ?" ಎಂದು ಕೈಯಲ್ಲಿದ್ದ ಕೋಲನ್ನು ಮೇಲೆತ್ತಿದನು.

"ನಾನು ಕಳ್ಳಗಿಳ್ಳ ಅಲ್ರೀ! ಅಪ್ಪ ಕೊಂದು ಹಾಕ್ತಾರೇ ಅಂತ ಹೆದರಿ ಇಲ್ಲಿಗೆ ಬಂದು ಅಡಗಿದ್ದೇನೆ." ಎಂದ ಹುಡುಗ ಹೆದರುತ್ತಲೇ.

"ನಿನ್ನ ಅಪ್ಪ ನಿನ್ನ ಕೊಲ್ತಾನಾ? ಯಾಕೋ ಕೊಲ್ತಾನೇ? ನೀನೇನ್ಮಾಡಿದಿ?" ಎಂದು ರಂಗಪ್ಪ ಆಶ್ಚರ್ಯದಿಂದ ಕೇಳಿದ.

"ಅದೇನೋ ನನಗ್ಗೊತ್ತಿಲ್ಲ. ಕತ್ತಲೆಯಾದ ಹೊತ್ತಿಗೆ ಮನೆಗೆ ಬಂದೆ. ಆಗ ಅಮ್ಮ ನನ್ನ ನೋಡಿ 'ನಿನ್ನಪ್ಪ ನಿನ್ನನ್ನೂ ನನ್ನನ್ನೂ ಕೊಂಧಾಕ್ತಾರೆ.

ತಾಯಿ ಮಂಚದ ಮೇಲೆ ಕುಳಿತಿದ್ದಳು. ತಂದೆ ಒಂದು ಕೋಲಿನಿಂದ ಇಲಿಯನ್ನು ಕೊಲ್ಲುತ್ತಿದ್ದನು.

ಹುಡುಗನ ತಂದೆ, ಇಲಿಯನ್ನು ಕೊಂದಕೋಲನ್ನು ಕೆಳಗೆ ಹಾಕಿ, ರಂಗಪ್ಪನನ್ನು ನೋಡಿ, "ರಕ್ಷಕಭಟನಾದವನು ಇಂಥಾ ದೌರ್ಜನ್ಯ ಮಾಡುವುದೆಂದರೇನು ? ಹೊರ ಬಾಗಿಲು ತಟ್ಟಿದರೆ ನಾವು ತೆರೆಯುವುದಿಲ್ಲವೇ ? ಬಾಗಿಲು ಒಡೆದು ಒಳಗೆ ಬಂದೆಯಲ್ಲಾ ? ಏಕೆ ? " ಎಂದು ಕೋಪದಿಂದ ಕೇಳಿದ.

"ಯಾವ ಸಮಯದಲ್ಲಿ ಹೇಗೆ ಬರಬೇಕೆಂಬುದೆಲ್ಲಾ ನನಗ್ಗೊತ್ತು. ನೀನು ನಿನ್ನ ಹೆಂಡತಿಯನ್ನು ಕೊಲ್ಲುವುದಕ್ಕೆ ಮೊದಲೇ ಬರಬೇಕಾಯಿತು. ಹುಂ, ಸಿದ್ಧನಾಗು !" ಎಂದ ರಂಗಪ್ಪ.

ಹುಡುಗನ ತಂದೆ ದೊಡ್ಡ ಕೋಪದಿಂದ, "ಮರ್ಯಾದೆಯಿಂದ ಮಾತಾಡು ! ನಾನು ನನ್ನ ಹೆಂಡತಿಯನ್ನು ಕೊಲ್ಲುತ್ತೇನೆಯೆ ? ಹುಚ್ಚು ಹಿಡಿಯಿತೇನು ? ಬೆಳಗಾಗಲಿ. ನಿನ್ನ ಮೇಲೆ ಮೇಲಧಿಕಾರಿಗಳ ಹತ್ರ ಫಿರ್ಯಾದಿ ಮಾಡುತ್ತೇನೆ" ಎಂದನು.

ರಂಗಪ್ಪ ಅಪ್ರತಿಭನಾಗಿ ನಡೆದ ಸಂಗತಿಯನ್ನೆಲ್ಲಾ ಹೇಳಿದನು. ನಿಜವಾಗಿ ನಡೆದ ಸಂಗತಿ ಏನಂದರೆ, ಆ ಹುಡುಗ ತಂದೆ ತಾಯಿಯರಿಗೆ ಬಹಳ ಕಾಲ ಮಕ್ಕಳಿಲ್ಲದೆ ಹುಟ್ಟಿದ ಕೊಂಡಾಟದ ಮಗ. ಆದುದರಿಂದ ಮಂದಮತಿಯಾಗಿಯೇ ಬೆಳೆದ. ತಂದೆಯ ಕುಲವೃತ್ತಿ ಕ್ಷೌರ ಮಾಡುವುದಾದುದರಿಂದ, ಮಗನಿಗೂ ಅದನ್ನು ಕಲಿಸಲು ಪ್ರಯತ್ನಿಸುತ್ತಿದ್ದ. ಅವನಿಗೆ ಅದರ ಮೇಲೆ ಇಷ್ಟವಿರಲಿಲ್ಲ. ಅಂತೆಯೇ ಕಲಿಯಲೇ ಇಲ್ಲ. ಅವನಿಗೆ ಯಾವ ಕೆಲಸವೂ ಬರಲಾರದೆಂದು ನಿರ್ಣಯಿಸಿ ಬೇಸತ್ತ ತಂದೆ ಕೆಲಸ ಹೇಳುವುದನ್ನೇ ಬಿಟ್ಟುಬಿಟ್ಟನು.

ಮನೆಯ ಗೋಡೆ ಮಾಡುಗಳೆಲ್ಲ ತುಂಬ ಅಸಹ್ಯವಾಗಿವೆ. ಹಬ್ಬದ ಸಮಯಕ್ಕೆ ಸುಣ್ಣ ಹೊಡೆಸಬೇಕು. ಹೊಸ ಬಟ್ಟೆಗಳನ್ನು ಕೊಂಡುಕೊಳ್ಳಬೇಕು.



ಅದಕ್ಕಾಗಿ ಹುಡುಗನ ತಂದೆ ಎಮ್ಮೆಯನ್ನು ಸಂತೆಯಲ್ಲಿ ಮಾರಿ ಕೈಯಲ್ಲಿ ಸ್ವಲ್ಪ ಹಣ ಮಾಡಿಕೊಳ್ಳಬೇಕೆಂದು ಬಗೆದನು.

ಅಂದುಕೊಂಡ ಪ್ರಕಾರ ಸಂತೆಗೆ ಹೋಗಲಾಗದಂತೆ ಶರೀರದ ಆರೋಗ್ಯ ಸ್ವಲ್ಪ ಕೆಟ್ಟುಹೋಗಿತ್ತು ಅವನಿಗೆ. ತನ್ನ ಮಗನು ತೀರಾ ಅಪ್ರಯೋಜಕನಲ್ಲವೆಂದೂ, ಅವನನ್ನು ಸಂತೆಗೆ ಕಳಿಸಿ ಎಮ್ಮೆಯನ್ನು ಮಾರಿಸುತ್ತೇನೆಂದೂ ಹೆಂಡತಿ ಹೇಳಿದಳು.

"ಅವನು ಸರಿಯಾಗಿ ವ್ಯಾಪಾರ ಮಾಡಿ ಬರಲಿಲ್ಲಾ ಅಂದ್ರೆ ಅವನಿಗೂ ನಿನಗೂ ತಕ್ಕ ಶಾಸ್ತಿ ಮಾಡದೆ ಬಿಡಲಾರೆ" ಎಂದು ಹೇಳಿ ತಂದೆ ಮಗನ ಹತ್ತಿರ, "ಸಂತೆಯಲ್ಲಿ ಎಮ್ಮೆಯ ಬೆಲೆ ನೂರಿಪ್ಪತ್ತೈದು ರೂಪಾಯಿ ಅಂತ ಹೇಳು. ಕಡೆಗೆ ನೂರು ರೂಪಾಯಿಗಾದರೂ ಮಾರಿಬಿಡು. ಅಷ್ಟೂ ಬಾರದೆಹೋದರೆ ಮಾರುವ ಕೆಲಸ ಬಿಟ್ಟು ಮನೆಗೆ ಬಂದುಬಿಡು." ಎಂದು ಒತ್ತಿ ಹೇಳಿದನು.

ಹುಡುಗ ಎಮ್ಮೆಯನ್ನು ಹೊಡೆದುಕೊಂಡು ಸಂತೆಗೆ ಹೋದ. ಆದಕ್ಕೆ ಯಾರೂ ನೂರು ರೂಪಾಯಿ ಕೊಡಲಿಕ್ಕೂ ಮುಂದೆ ಬರಲಿಲ್ಲ. ಸಾಯಂಕಾಲದವರೆಗೆ ನೋಡಿ, ಮಗನು ಮನೆಗೆ ಹಿಂದಿರುಗಿ ಬಂದ.

"ಎಮ್ಮೆಯನ್ನು ಎಷ್ಟಕ್ಕೆ ಮಾರಿದೆಯೋ ?" ಎಂದು ತಾಯಿ ಕೇಳಿದಳು.

"ಮಾರಲಿಲ್ಲಮ್ಮ. ಆದಕ್ಕೆ ಯಾರೂ ನೂರು ರೂಪಾಯಿ ಕೊಡಲಿಲ್ಲ." ಎಂದ ಮಗ.

"ಹಾಗಾದರೆ ಎಮ್ಮೆ ಎಲ್ಲಿದೆ ?" ಎಂದು ತಾಯಿ ದೂರದವರೆಗೆ ಕಣ್ಣೋಡಿಸಿದಳು.

"ಮಾರದಿದ್ದರೆ ಮನೆಗೆ ಬಂದುಬಿಡು ಅಂತ ಅಪ್ಪ ಹೇಳಿದರಲ್ಲ? ಎಮ್ಮೇನ ಮನೆಗೆ ತಾ ಅಂತ ಹೇಳ ಲಿಲ್ಲ" ಅಂದ ಮಗ.

ತಾಯಿ ಮಗನ ಮಾತು ಕೇಳಿ ಹಣೆ ಚಚ್ಚಿಕೊಂಡು ಅಳುತ್ತ, "ಎಂಥಾ ಕೆಲಸ ಮಾಡಿದಿಯಲ್ಲಪ್ಪಾ! ನಿನ್ನಪ್ಪ ನಿನ್ನನ್ನೂ ನನ್ನನ್ನೂ ಕೊಂಧಾಕ್ತಾರಲ್ಲಾ! ಎತ್ತಾದರೂ ಓಡಿಬಿಡು!" ಎಂದಳು.

ಹುಡುಗ ಒಳಕ್ಕೆ ಬಗ್ಗಿ ನೋಡಿದ. ಆಗ ಅವನ ಅಪ್ಪ ಮಾರುದಿನದ ಕೆಲಸಕ್ಕಾಗಿ ಕತ್ತಿ ಮಸೆಯುತ್ತಾ ಇದ್ದ. ಕೂಡಲೇ ಅವನು ಅಲ್ಲಿಂದ ಓಡಿಹೋಗಿ ಶಿವಾ ಲಯದಲ್ಲಿ ರಂಗಪ್ಪನ ಕೈಗೆ ಸಿಕ್ಕಿಬಿದ್ದಿದ್ದ.

"ನನ್ನ ಹುಚ್ಚು ಮಗನ ಮಾತನ್ನು ನಂಬಿ, ಸರಿ ಯಾಗಿದ್ದ ಬಾಗಿಲನ್ನೂ ಗೋಡೆಯನ್ನೂ ಒಡೆದು ಹಾಕಿದೆಯಲ್ಲಾ ? ಬೆಳಗಾಗಲಿ, ನಿನ್ನ ಉದ್ಯೋಗವನ್ನೇ ಕೇಳಿಸಿ ಹಾಕದಿದ್ದರೆ ನಾನು ಊರವರ ತಲೆ ಮುಟ್ಟು ವವನಲ್ಲ!" ಎಂದ ಹುಡಗನ ತಂದೆ.

"ಹಾಗೆ ಮಾಡಬೇಡಯ್ಯ. ನಿನ್ನ ದಮ್ಮಯ್ಯಾ ಅಂತೀನಿ. ನಾನೂ ನಿನ್ನ ಹಾಗೇ ಬಡವನೇ. ನನ್ನ ಹೊಟ್ಟೆಗೆ ಹೊಡೀಬೇಡ. ನಿನಗೆ ನಷ್ಟಪರಿಹಾರ ವಾಗಿ ಮುನ್ನೂರು ರೂಪಾಯಿ ನಾನೇ ಕೊಡು ತ್ತೇನೆ." ಎಂದು ಹೇಳಿ ರಂಗಪ್ಪ ಅವನನ್ನು ಸಮಾ ಧಾನಪಡಿಸಿ ಮನೆಗೆ ಹೋದ.

ತನ್ನ ದುರದೃಷ್ಟಕ್ಕಾಗಿ ಹಣೆ ಬಡೆದುಕೊಳ್ಳುತ್ತ, ಕಳ್ಳನ ಹಾಗೆ ಹೆಂಡತಿಯ ಚಂದ್ರಹಾರಕ್ಕಾಗಿ ಕಟ್ಟಿಟ್ಟ ಮುನ್ನೂರು ರೂಪಾಯಿಗಳನ್ನೂ ತಂದು ಅವನಿಗೆ ಕೊಟ್ಟ ರಂಗಪ್ಪ. ಇನ್ನು ಹೆಂಡತಿಗೆ .ಸಮಾಧಾನ ಹೇಳುವ ಹೊಸ ಚಿಂತೆ ಬಂದು ಅವನನ್ನು ಬಲವಾಗಿ ಹಿಡಿಯಿತು ಪಾಪ.

ರಂಗಪ್ಪ ಕೊಟ್ಟ ಹಣದಿಂದ ಆ ಮನೆಯವನು ಬಾಗಿಲು ಗೋಡೆ ಸರಿಮಾಡಿಸಿ, ಸುಣ್ಣ ಬಣ್ಣ ಹೊಡೆದು, ಹೊಸ ಬಟ್ಟೆಗಳನ್ನೂ ಕೊಂಡು ಕೊಂಡನು. ಸಂತೆಯಲ್ಲಿ ಅನಾಥವಾಗಿ ಬಿಟ್ಟಿದ್ದ ಎಮ್ಮೆಯೂ ತಾನಾಗಿ ಮನೆಗೆ ಬಂದಿತ್ತು.





# ಕಲಿಯಬಾರದ ಪಾಠಗಳು

ಹಿಂದೆ ಒಂದಾನೊಂದು ಊರಿನಲ್ಲಿ ಗೋಪಾಲನೆಂಬವನು ಜಾನಕಿ ಎಂಬ ಹೆಂಡತಿಯೊಂದಿಗೆ ವಾಸವಾಗಿದ್ದನು. ಅವರಿಗೆ ಶೀನನೆಂಬ ಒಬ್ಬ ಮಗನಿದ್ದ. ಗೋಪಾಲನು ಸ್ವಲ್ಪವೂ ಸೋಮಾರಿತನವಿಲ್ಲದೆ, ಶ್ರಮಿಸಿ ಒಳ್ಳೆಯ ಫಸಲು ತೆಗೆದು ಕುಟುಂಬವು ಸುಖವಾಗಿರುವಂತೆ ಪೋಷಿಸಿಕೊಂಡು ಬರುತ್ತಿದ್ದನು.

ಒಂದು ದಿನ ನೆರೆ ಮನೆಯ ಗೋವಿಂದನು ಗೋಪಾಲನ ಮನೆಗೆ ಬಂದು, "ಗೋಪಾಲಾ, ನೀನು ಇಡೀ ದಿನ ಮೈಪುಡಿಯಾಗುವ ಹಾಗೆ ಕೆಲಸ ಮಾಡುವೆಯಷ್ಟೆ? ಇಲ್ಲಿಯ ದೇವಾಲಯದಲ್ಲಿ ಶಾಸ್ತ್ರಿಗಳು ಪುರಾಣ ಹೇಳುತ್ತಾರೆ. ಇಬ್ಬರೊಟ್ಟಿಗೆ ಹೋಗೋಣ, ಬರುತ್ತೀಯಾ?" ಎಂದನು.

ಅವನು ಗೋಪಾಲನೊಂದಿಗೆ ಹೊರಡಲು ನಿಶ್ಚಯಿಸಿ, ಪಶುಗಳ ಭಾರವನ್ನು ಹೆಂಡತಿಯ ಮೇಲೆ ಹಾಕಿ, ಪುರಾಣ ಶ್ರವಣಕ್ಕೆ ಹೋದನು.

ಆ ದಿನ ಪುರಾಣದ ಶಾಸ್ತ್ರಿಗಳು ಸ್ವರ್ಗವನ್ನು ಕುರಿತು ತುಂಬ ಚೆನ್ನಾಗಿ ಹೇಳಿದರು. ಮರುದಿನ ಗೋಪಾಲನು ಹೊಲದ ಕೆಲಸ ಮುಗಿಸಿ, ಅಂಗಡಿ ಬೀದಿಗೆ ಹೋಗಿ ಕುಡಿದು ಮನೆಗೆ ಬಂದ. ಈವರೆಗೂ ಒಂದು ಗುಟುಕು ಸಹಾ ಕುಡಿಯದಿರುವ ತನ್ನ ಗಂಡ, ಕುಡಿದು ಕೆಂಗಣ್ಣಿನಿಂದ ಬಂದುದನ್ನು ನೋಡಿ ಹೆಂಡತಿ ಜಾನಕಿಗೆ ಗಾಬರಿಯಾಯಿತು. ನಿಷ್ಠೂರವಾಗಿ ಅದನ್ನು ಖಂಡಿಸಿದಳು.

ಗೋಪಾಲ ನಗುತ್ತ, "ನೀನೊಬ್ಬಳು ಹುಚ್ಚಿ! ಪುರಾಣ ಕೇಳುವ ಮೊದಲು ನಾನು ಕೂಡಾ ನಿನ್ನ ಹಾಗೇ ತಿಳಿದಿದ್ದೆ. ಆದರೆ ಪುರಾಣದಲ್ಲಿ ದೇವತೆಗಳೆಲ್ಲರೂ ಕುಡಿಯುತ್ತಾರೆ, ಗೊತ್ತಾ?" ಎಂದನು.

ಏನು ಉತ್ತರ ಕೊಡಬೇಕೆಂದು ಜಾನಕಿಗೆ ಗೊತ್ತಾಗಲಿಲ್ಲ.

ಮೂರನೇ ದಿನ ಗೋಪಾಲ ತನ್ನೊಂದಿಗೆ ತನ್ನ ಮಗ ಶೀನನನ್ನು ಕೂಡಾ ಪುರಾಣ ಕೇಳಲು ಕರೆದುಕೊಂಡು ಹೋದ. ಆ ದಿನ ಪುರಾಣದಲ್ಲಿ ಇಂದ್ರನು ಸಗರನ ಕುದುರೆಯನ್ನು ಹೇಗೆ ಕದ್ದುಕೊಂಡು ಹೋದನೆಂಬುದನ್ನು ಪೌರಾಣಿಕರು ಬಹಳ ರಂಗಾಗಿ ಹೇಳಿದರು.

ಆ ಮೇಲೆ ಜಾನಕಿ ತಾನಿಟ್ಟ ಚಿಲ್ಲರೆ ದುಡ್ಡಿನ ಡಬ್ಬಿಗಳು ಖಾಲಿಯಾಗಿರುವುದನ್ನು ನೋಡಿದಳು. ತನ್ನ ಗಂಡ ಮತ್ತು ಮಗನ ಹೊರತು ಆ ಹಣ

ಎಂ. ಸಂಧ್ಯಾರಾಣಿ

ತೆಗೆಯುವವರು ಬೇರೆ ಯಾರೂ ಇರಲಿಲ್ಲ. ಗಂಡ ಹೇಳಿಯೇ ತೆಗೆಯುತ್ತಾನೆ. ಮಗನಂತೂ ಅದರ ಕಡೆಗೆ ಹಣಿಕಿ ಕೂಡಾ ನೋಡುವುದಿಲ್ಲ. ಕಡೆಗೆ ಅವಳು ಗಂಡನ ಹತ್ತಿರ ಕೇಳಿದಳು.

"ನಾನು ತೆಗೀಲಿಲ್ಲವಲ್ಲಾ! ನೀನೇ ಮರೆತು ಬೇರೆಲ್ಲಿಯಾದರೂ ಇಟ್ಟೆಯೇನೋ?" ಎಂದನು.

ಶೀನ ಆ ರಾತ್ರಿ ಬೇಕೂ ಬೇಡದ ಹಾಗೆ ಉಂಡು ಬಳಬಳಾ ವಾಂತಿ ಮಾಡಿದ. ಇಡಿಯಿಡೀ ಕಡಲೆ ಬೇಳೆ ಅದರಲ್ಲಿದ್ದುವು.

"ಏನೋ ಇದು? ಕಡ್ಲೇ ಉಂಡೆ ತಿಂದು ಅಜೀರ್ಣ ತಂದ್ಕೊಂಡ್ಯಾ? ಉಂಡೆ ಕೊಂಡು ಕೊಳ್ಳಿಕ್ಕೆ ನಿನಗೆ ದುಡ್ಡೆಲ್ಲಿತ್ತು?" ಎಂದು ಕೇಳಿದಳು ಜಾನಕಿ.

"ಹಲಗೇ ಮೇಲಿದ್ದ ಡಬ್ಬಿಯಿಂದ ತೆಗೆದೆನಮ್ಮ" ಎಂದ ಶೀನ. "ಯಾಕೋ ಕಳ್ಳತನ ಮಾಡಿದಿ? ಏನು ದುರ್ಬುದ್ಧಿ ಇದು?" ಎಂದಳು ತಾಯಿ.

"ಇವ್ರು ಕಳ್ಳತನ ಮಾಡಿಲ್ವೇ? ನಾನು ಮಾಡಿದರೆ ಮಾತ್ರ ತಪ್ಪಾಗುತ್ತೇನು?" ಎಂದು ಕೇಳಿದ ಶೀನ.

ಆ ಮೇಲೆ ಎರಡು ದಿನಗಳು ಕಳೆದುವು. ತಂದೆ ಮಗಂದಿರು ಪುರಾಣಕ್ಕೆ ಹೋಗಿ ಬರುತ್ತಿದ್ದರು. ಗೋಪಾಲ ಹೊಲದಲ್ಲಿ ಶ್ರಮಿಸಲು ಹೋಗಲಿಲ್ಲ. ಶೀನ ಪಾಠ ಕಲಿಯಲೂ ಹೋಗಲಿಲ್ಲ. ಗೋಪಾಲ ಬೆಳಗ್ಗಿನಿಂದ ಸಾಯಂಕಾಲದವರೆಗೆ ದೇವರ ನಾಮ ಸ್ಮರಣೆ ಮಾಡುತ್ತಾ ಕುಳಿತುಕೊಳ್ಳುತ್ತಿದ್ದನು. ಹೀಗಿರಲು ಬಿಟ್ಟರೆ ಮನೆ ನಡೆಸಲು ಸಾಧ್ಯವಿಲ್ಲವೆಂದು ಜಾನಕಿಗೆ ಗೊತ್ತಾಯಿತು. ಇದಕ್ಕೇನಾದರೂ ಮಾಡಿ ಗಂಡನಿಗೆ ಬುದ್ಧಿ ಕಲಿಸಬೇಕೆಂದುಕೊಂಡಳು.

ಎಂದಿನಂತೆ ಸ್ನಾನ ಮುಗಿಸಿ ಗೋಪಾಲನು ದೇವರ ಮಂತ್ರಗಳನ್ನು ಉಚ್ಚರಿಸುತ್ತ ಹೆಂಡತಿ ಊಟಕ್ಕೆ ಕರೆಯುವುದನ್ನೇ ಕಾದು ಕುಳಿತಿದ್ದನು. ಎಷ್ಟು ಹೊತ್ತಾದರೂ ಒಳಗಿನಿಂದ ಕರೆಬರಲಿಲ್ಲ. ತಂದೆಯೂ ಮಗನೂ ಒಳಗೆ ಹೋಗಿ ನೋಡಿದರು. ಜಾನಕಿ ಹೂಗಳ ರಾಶಿಯ ಮುಂದೆ ಮಾಲೆ ಕಟ್ಟುತ್ತ ಕುಳಿತಿದ್ದಳು. ಅಡಿಗೆ ಮಾಡಿದ ಲಕ್ಷಣವೇ ಕಾಣುವುದಿಲ್ಲ.

ಗೋಪಾಲ ಕೋಪದಿಂದ, "ಈಗ ನಿನಗೆ ಹೂಗಳೇನು ಅವಸರ ಬಂತು? ಅಡಿಗೆ ಮಾಡುವ ಜ್ಞಾನವೇ ಇಲ್ಲದ ಹಾಗೆ ಏನಿದು?" ಎಂದ.

ಜಾನಕಿ ನಗುತ್ತ, "ಶಚೀದೇವಿ ಯಾವಾಗಲೂ ತನ್ನ ಗಂಡನಿಗೆ ತನ್ನ ಕೈಯಿಂದಲೇ ಹೂ ಮಾಲೆ ಮಾಡಿ ಹಾಕುತ್ತ ಪೂಜೆ ಮಾಡುತ್ತಿದ್ದಳಂತೆ. ಅವಳು ಅಡಿಗೆ ಮಾಡಿದಳೆಂಬ ಕಥೆ ಯಾವ ಪುರಾಣದಲ್ಲಿಯೂ ಇಲ್ಲ" ಎಂದಳು. ಆ ಮಾತು ಕೇಳಿ ಗೋಪಾಲನಿಗೂ ಶೀನನಿಗೂ ಪುರಾಣದ ಮಯಕ ಬಿಟ್ಟುಹೋಯಿತು. ಆ ಮೇಲೆ ಅವರು ಎಂದಿನಂತೆ ಮನುಷ್ಯರಾಗಿದ್ದರು.





# ಹೊಸಸೊಸೆ

ಒಂದು ಊರಿನಲ್ಲಿ ಕುಮುದಿನಿ ಎಂಬ ಹುಡುಗಿಗೆ ಮದುವೆಯಾಯಿತು. ಅವಳು ಅತ್ತೇ ಮನೆಗೆ 'ಗೃಹ ಪ್ರವೇಶ' ಮಾಡಿದ್ದೂ ಆಯಿತು. ಅವಳ ಗಂಡನ ಹೆಸರು ಶಚೀಂದ್ರ. ಕುಮುದಿನಿ ತನ್ನ ಅತ್ತೆಯನ್ನು ಕುರಿತು ಮದುವೆ ಯಾಗುವುದಕ್ಕಿಂತ ಮೊದಲೇ ಏನೇನೋ ಕಲ್ಪಿಸಿಕೊಂಡಿದ್ದಳು. ಒಂದು ದಿನ ತಾನೂ ಅತ್ತೆಯ ಪದರಿನಲ್ಲಿ ಬೀಳಬೇಕಾಗುತ್ತದೆಂದು ಹೆದರಿ ಕೊಂಡಿದ್ದಳು.

ಆದರೆ ತೀರಾ ಅತ್ತೆಯ ಮನೆಯೊಳಗೆ ಕಾಲಿಟ್ಟಂದಿ ನಿಂದ ಅವಳಿಗೆ ಆಶ್ಚರ್ಯವಾಯಿತು. ಕುಮುದಿನಿಯ ಅತ್ತೆ ನಗುತ್ತ ಇದಿರಾಗಿ ಬಂದು ಒಳಗೆ ಕರೆದು ಕೊಂಡು ಹೋದಳು. ಆಕೆ ತನ್ನ ಸೊಸೆಯನ್ನು ಹೆತ್ತ ತಾಯಿಗಿಂತ ಹೆಚ್ಚಿನ ಪ್ರೀತಿಯಿಂದ ನೋಡುತ್ತಿದ್ದಳು.

ಆದರೂ ಕುಮುದಿನಿಗೆ ಅನುಮಾನ ಹೋಗಲಿಲ್ಲ. ಕೆಲಮಂದಿ ಅತ್ತೆಯರು ಮೊದಲು ತುಂಬಾ ಪ್ರೀತಿ ಬಸಿಯುತ್ತಾ, ಕಾಲಕ್ರಮದಲ್ಲಿ ನಿಜವಾದ ಅತ್ತೆಯ ಬಣ್ಣ ತೋರಿಸದೆ ಬಿಡಲಾರರೆಂದು ತನ್ನೊಳಗೇ ಅಂದುಕೊಳ್ಳುತ್ತ ಹೆದರಿಕೊಂಡೇ ಇದ್ದಳು. ಶಚೀಂದ್ರನು ಬೆಳಿಗ್ಗೆ ಎದ್ದು ತಂಗಳನ್ನು ತಿಂದು ಗದ್ದೆಗಳ ಕೆಲಸಕ್ಕೆ ಹೋದನೆಂದರೆ, ಕತ್ತಲಯಾದ ಮೇಲೆಯೇ ಮನೆಗೆ ಬರುತ್ತಿದ್ದನು. ಅವನಿಗೆ ಹೆಂಡತಿಯ ಮೇಲೆ ತುಂಬಾ ಪ್ರೇಮವಿತ್ತು. ಆದಕ್ಕಿಂತ ಹೆಚ್ಚಾಗಿ ತಾಯಿಯ ಮೇಲೆ ಭಕ್ತಿ ಗೌರವಗಳಿದ್ದುವು. ತನ್ನ ಹೆಂಡತಿ ಮನೆಗೆ ಬಂದಂದಿ ನಿಂದಲೂ ಹೆಚ್ಚಿನ ಕೆಲಸಗಳನ್ನೆಲ್ಲ ಹೆಂಡತಿಯೇ ಮಾಡುವಳೆಂದೂ ಸೊಸೆ ಬಂದ ಮೇಲೆ ತನ್ನ ತಾಯಿಯ ಭಾರ ತುಂಬಾ ಕಡಮೆಯಾಗಿದೆ ಎಂದೂ ತನ್ನೊಳಗೇ ಸಮಾಧಾನ ಹೇಳಿಕೊಂಡಿದ್ದನು.

ಒಂದು ದಿನ ರಾತ್ರಿ ಅವನು ತನ್ನ ಹೆಂಡತಿಯನ್ನು ಸ್ವಲ್ಪ ಆಳಿಸಿ ನೋಡೋಣವೆಂದುಕೊಂಡು, ಊಟ ಮಾಡುತ್ತ, "ಇವತ್ತು ನಿನಗೇನು ಕೇಡು ಬಂತು? ಅಡಿಗೆ ಪೂರಾ ಕೆಡಿಸಿ ಹಾಕಿದಿ!" ಎಂದ ಕೋಪದಿಂದ.

"ಇವತ್ತು ನಿಮಗೇ ಏನೋ ಆಗಿದೆ. ದಿನಾ ಅಡಿಗೆ ಮಾಡುವ ನಿಮ್ಮಮ್ಮನೇ ಇವತ್ತು ಕೂಡಾ ಅಡಿಗೆ ಮಾಡಿದ್ದು." ಎಂದಳು ಕುಮುದಿನಿ.

ಶಚೀಂದ್ರನ ಮಾನಸ್ಸಿಗೆ ಚಿವ್ವಕ್ಕನೆ ಚಿವುಟಿದ ಹಾಗಾಯಿತು. "ದಿನಾ ಅಮ್ಮನೇ ಅಡಿಗೇ ಮಾಡೋದಾ? ನೀನು?" ಎಂದ.

ವಿ. ಜಯರಾಂ

"ಅಂದರೆ ದಿನಾ ನಾನು ತಿಂದು ಕೂತು ಕೊಳ್ಳೋದು ಅಂತ ತಾನೇ ಹೇಳ್ತೀರಿ ? ಹುಂ. ನಮ್ಮ ಮನೆಯಲ್ಲಿ ಇಲ್ಲಿದ್ದ ತಂಬಿಗೆ ಅಲ್ಲಿಡುವ ಕೆಲಸ ಕೂಡಾ ಮಾಡಿಲ್ಲ ನಾನು." ಎಂದಳು ಕುಮುದಿನಿ ಕೋಪದಿಂದ.

ಶಚೀಂದ್ರನಿಗೆ ನಿಜಕ್ಕೂ ದೊಡ್ಡ ಕೋಪ ಬಂತು. "ಹಾಗಾದರೆ ತೌರು ಮನೇಲೇ ಹೋಗಿ ಇರಬಾರ ದೇನು ? " ಎಂದವನೇ ಊಟ ಬಿಟ್ಟು ಎದ್ದು ಬಿಟ್ಟ.

ಕುಮುದಿನಿಗೆ ದುಃಖ ಉಕ್ಕುಕ್ಕಿ ಬಂತು. ಗಂಡ ನಿಂದ ಇಂಥಾ ಮಾತು ಅನ್ನಿಸಿಕೊಂಡ ಮೇಲೆ ಏಕೆ ಈ ಮನೆಯಲ್ಲಿರಬೇಕು ? ಮರುದಿನ ಬೆಳಗ್ಗೆಯೇ ಅವಳು ಹೊರಟಳು. ಸೊಸೆ ಅಕಸ್ಮಾತ್ತಾಗಿ ತೌರಿಗೆ ಹೊರಟ ಕಾರಣ ತಿಳಿಯದ ಅತ್ತೆ, "ಪಾಪ, ಸೊಸೆಗೆ ಥಕ್ಕನೆ ತೌರಿನ ನೆನಪಾಯಿತೇನೋ, ಹೋಗಿ ಬರಲಿ" ಎಂದುಕೊಂಡು ಸಂತೋಷದಿಂದ ಕಳುಹಿಸಿಕೊಟ್ಟಳು.

ಕುಮುದಿನಿ ತೌರುಮನೆಗೆ ತಲಪಿದ ಕೂಡಲೇ ತಾಯಿಯನ್ನು ಅಪ್ಪಿಕೊಂಡು ಅಳುತ್ತ, "ನಾನಿನ್ನು ಅಲ್ಲಿಗೆ ಹೋಗಲಾರೆ. ಅಲ್ಲಿ ನನಗೆ ಕಾಸಿನ ಮರ್ಯಾದೆ ಕೂಡ ಇಲ್ಲ." ಎಂದು ಬಿಕ್ಕಳಿಸಿದಳು.

ಏನೋ .ಗಂಡ ಹೆಂಡಿರ ಜಗಳವೆಂದುಕೊಂಡು ತಾಯಿ, "ಹೋಗಲಿ ಬಿಡಮ್ಮ, ಇಲ್ಲೇ ಇರು. ಬೇಗ ದಲ್ಲಿ ಅಳಿಯನಿಗೆ ಒಳ್ಳೇ ಬುದ್ಧಿ ಬಾರದೆ ಹೋಗದು" ಎಂದು ಸಮಜಾಯಿಸಿದಳು.

ಕುಮುದಿನಿಗೆ ಮಹೇಂದ್ರನೆಂಬ ಅಣ್ಣನಿದ್ದ. ಅವನ ಹೆಂಡತಿ ವಿನೋದಿನಿ ಹೊಸದಾಗಿ ಸಂಸಾರಕ್ಕೆ ಬಂದ ಹುಡುಗಿ. ಮನೆ ಕೆಲಸವೆಲ್ಲಾ ವಿನೋದಿನಿಯೇ ಮಾಡುತ್ತಿದ್ದಳು. ಅದನ್ನು ನೋಡುವಾಗ ಕುಮುದಿ ನಿಗೆ ಸಂಕಟವಾಗುತಿತ್ತು. "ಅಡಿಗೆಯವಳಿಗೆ ಏನಾಯಿ ತಮ್ಮಾ ?" ಎಂದು ತಾಯಿಯನ್ನು ಕೇಳಿದಳು.

"ಸೊಸೆ ಬಂದ ಮೇಲೆ ಅಡಿಗೆಯವಳನ್ನು ಕಳು ಹಿಸಿಬಿಟ್ಟೆ. ಕೆಲಸ ಮಾಡಿಕೊಂಡಿದ್ದರೆ ಹುಡುಗಿಯರು ಸವೆದು ಹೋಗುವುದೇನಿಲ್ಲ. ಬದಲಾಗಿ ಬಲ ಕೂಡು ತ್ತದೆ." ಎಂದಳು ಕುಮುದಿನಿಯ ತಾಯಿ.

ಬೆಳಗಾದ ಕೂಡಲೇ ತನ್ನ ತಾಯಿ ವಿದೋದಿನಿ ಯನ್ನು ಎಬ್ಬಿಸಿ, ಹಾಗೆ ಮಾಡು. ಹೀಗೆ ಮಾಡು ಎಂದು ಕೆಲಸ ಹೇಳುವುದನ್ನು ಕುಮುದಿನಿ ನೋಡುತ್ತಾ ಇದ್ದಳು. ತನ್ನ ಹಾಗಿನ ಹುಡುಗಿ ಜೀತ ದಾಳಿನಂತೆ ದುಡಿಯುವುದನ್ನು ನೋಡಿ ಕುಮುದಿನಿ ಕಂಪಿಸಿದಳು.

ಅವಳು ತಾಯಿಯ ಹತ್ತಿರ ವಿನೋದಿನಿಯ ಪರ ವಾಗಿ ವಾದಿಸತೊಡಗಿದಳು. ತಾಯಿ ತನ್ನ ಅತ್ತಿಗೆ ಯನ್ನು ಸರಿಯಾಗಿ ನೋಡದ ಪಕ್ಷದಲ್ಲಿ ತೌರು ಮನೆಯ ಮೆಟ್ಟಿಲು ಹತ್ತಲಾರೆನೆಂದು ಬೆದರಿಸಿ, ತನ್ನ ಅತ್ತೆಯ ದೊಡ್ಡ ತನವನ್ನು ಮನಸ್ಸಿನಲ್ಲೇ ಮೆಚ್ಚುತ್ತ ತನ್ನ ಗಂಡನ ಮನೆಗೆ ಹಿಂದಿರುಗಿದಳು.



# ದಧೀಚಿಯ ತ್ಯಾಗ



ವಿಶ್ವಕರ್ಮನ ಮಗನನ್ನು ಇಂದ್ರನು ಕೊಂದು ದಕ್ಕೆ ತಕ್ಕ ಪ್ರತಿಕ್ರಿಯೆ ಮಾಡಲು ವಿಶ್ವಕರ್ಮನು ಯಜ್ಞವನ್ನು ಮಾಡಿದನು. ಆ ಯಜ್ಞಕುಂಡ ದಿಂದ ವೃತ್ರಾಸುರನೆಂಬ ಭಯಂಕರನೊಬ್ಬ ಹುಟ್ಟಿದ.



ಆ ವೃತ್ರಾಸುರನು ವಿಶ್ವಕರ್ಮನ ಕೋರಿಕೆ ತೀರಿಸುವುದಾಗಿ ಮಾತು ಕೊಟ್ಟು, ಬ್ರಹ್ಮನನ್ನು ಕುರಿತು ನೂರು ವರ್ಷ ಮಹಾ ತಪಸ್ಸು ಮಾಡಿದನು.



ಅವನು ಬ್ರಹ್ಮನಿಂದ ವರ ಪಡೆದುಬಿಟ್ಟರೆ ಅವನನ್ನು ಜಯಿಸಲು ಸಾಧ್ಯವಿಲ್ಲವೆಂದು ಕೊಂಡು, ಇಂದ್ರನೇ ಮೊದಲಾದ ದೇವತೆಗಳು ವೃತ್ರನ ತಪಸ್ಸನ್ನು ಭಗ್ನಮಾಡಲು ಪ್ರಯತ್ನಿಸ ತೊಡಗಿದರು.



ಅವರು ವೃತ್ರನ ಏಕಾಗ್ರತೆಯನ್ನು ಕೆಡಿಸಲು ಅಪ್ಸರಸಿಯರನ್ನು ಕಳುಹಿಸಿದರು. ಅಪ್ಸರಸಿಯರು ಹಾಡುತ್ತ, ನಾಟ್ಯವಾಡಿ ಆಡಿ ದಣಿದರೇ ಹೊರತು ವೃತ್ರನು ಅವರಕಡೆಗೆ ಕಣ್ಣೆತ್ತಿಯೂ ನೋಡಲಿಲ್ಲ.



ಕಡೆಗೆ ವೃತ್ರನ ಮುಂದೆ ಬ್ರಹ್ಮನು ಪ್ರತ್ಯಕ್ಷನಾಗಿ ಏನು ವರಬೇಕೆಂದು ಕೇಳಿದನು. ತಾನು ಹಗಲಲ್ಲಾಗಲೀ, ರಾತ್ರಿಯಲ್ಲಾಗಲೀ, ಕಟ್ಟಿಗೆಯಿಂದಲೋ ಲೋಹಗಳಿಂದಲೋ ದೂಡಿದ ಆಯುಧಗಳಿಂದಾಗಲೀ, ಬೆಂಕಿಯಿಂದಾಗಲೀ ಸಾಯದಂತೆ ವರವನ್ನು ಕೇಳಿದ ವೃತ್ರ.



ಬ್ರಹ್ಮನಿಂದ ಹಾಗೆಯೇ ವರವನ್ನು ಪಡೆದ ವೃತ್ರಾಸುರನು ತನ್ನ ರಾಕ್ಷಸಬಲದೊಂದಿಗೆ ಹೋಗಿ ದೇವತೆಗಳನ್ನು ಪೀಡಿಸಲು ತೊಡಗಿದನು. ಬಹಳ ಕಾಲದವರೆಗೆ ಯುದ್ಧಗಳು ನಡೆದುವು.

ದೇವತೆಗಳು ವೃತ್ರನನ್ನು ಏನು ಮಾಡಲೂ ಸಾಧ್ಯವಿಲ್ಲದಾದರು. ದೇವತೆಗಳೊಬ್ಬೊಬ್ಬರೇ ವೃತ್ರನನ್ನು ನೋಡಿ ಹೆದರಿ . ಓಡಿಹೋಗ ತೊಡಗಿದರು. ಕಡೆಗೆ ಇಂದ್ರನು ಒಬ್ಬಂಟಿಗನಾಗಿ ವೃತ್ರನೊಂದಿಗೆ ಹೋರಾಡುವಾಗ, ವೃತ್ರನು ಇಂದ್ರನನ್ನು ಹಿಡಿದು ನುಂಗಿದನು.





ದೇವತೆಗಳು ತಮ್ಮ ಗುರುವಾದ ಬೃಹಸ್ಪತಿ ಯೊಂದಿಗೆ ತಮಗೆ ಬಂದ ಕಷ್ಟವನ್ನು ಹೇಳಿ ಕೊಂಡರು. ಬೃಹಸ್ಪತಿ ವಿಚಿತ್ರವಾದ ಆಕಳಿಕೆ ಯನ್ನು ಸೃಷ್ಟಿಸಿದನು.

ಮಾಯಾ ರೂಪದ ಆಕಳಿಕೆ ವೃತ್ರನನ್ನು ಆವಹಿಸಿ ಕೊಂಡಳು. ವೃತ್ರನು ದೊಡ್ಡದಾಗಿ ಆಕಳಿಸು ವಾಗ ಇಂದ್ರನು ಹೊರಬಿದ್ದನು.





ವೃತ್ರನು ಯಾವ ಬಗೆಯ ಆಯುಧದಿಂದಾಗಲೀ ಬೆಂಕಿಯಿಂದಾಗಲೀ ಸಾಯಲಾರ. ಯಾವನಾದರೂ ಮಹರ್ಷಿಯ ಎಲುಬಿನ ಸಹಾಯದಿಂದ ಇಂದ್ರನನ್ನು ಕೊಲ್ಲಬಹುದೆಂದು ತಿಳಿದು ಇಂದ್ರನು ದಧೀಚಿಯ ಬಳಿಗೆ ಹೋಗಿ ಸಂಗತಿಯನ್ನು ಹೇಳಿದನು.



ದಧೀಚಿಗೆ ಇಂದ್ರನ ಮೇಲೆ ಆದರವಿಲ್ಲದಿದ್ದರೂ, ಲೋಕಕಂಟಕನಾದ ವೃತ್ರನು ಸಾಯುವುದೇ ಬೇಕಿತ್ತು. ಅದಕ್ಕಾಗಿ ಆವನು ಸಮಾಧಿ ಹೊಂದಿ ದೇಹವನ್ನು ತ್ಯಾಗ ಮಾಡಿದನು.



ಇಂದ್ರನು ದಧೀಚಿಯ ಎಲುಬಿನಿಂದ ವಜ್ರಾಯುಧವನ್ನು ಮಾಡಿ, ಹಗಲು ರಾತ್ರಿಗಳಲ್ಲದ ಸಂಧ್ಯೆಯ ವೇಳೆಯಲ್ಲಿ ವೃತ್ರಾಸುರನನ್ನು ಹೊಡೆದುಕೊಂಡನು. ಹೀಗೆ ಲೋಕಕ್ಷೇಮಕ್ಕಾಗಿ ನಡೆಯಿತು ದಧೀಚಿಯ ತ್ಯಾಗ.

# ಕಥಾ ಶೀರ್ಷಿಕೆಯ ಸ್ಪರ್ಧೆ

**ಈ ಕಥೆಗೆ ಒಳ್ಳೆಯ ಶೀರ್ಷಿಕೆಯನ್ನು ಇಟ್ಟು ರೂ. ೨೫ ಗೆಲ್ಲಿರಿ!**

?

ಒಬ್ಬ ವೈಷ್ಣವಾಚಾರ್ಯನು ದೂರ ಪ್ರಯಾಣ ಮಾಡುತ್ತ ಕತ್ತಲೆಯಾಗುವಾಗ ಒಂದು ಗ್ರಾಮವನ್ನು ತಲಪಿದನು. ಆ ಗ್ರಾಮದಲ್ಲಿರುವವರೆಲ್ಲಾ ವೈಷ್ಣವರೆಂದು ದಾರಿಯಲ್ಲಿ ಒಬ್ಬ ಮನುಷ್ಯ ಅವನಿಗೆ ಹೇಳಿದ್ದ. ಆದುದರಿಂದ ವೈಷ್ಣವಾಚಾರ್ಯನು ಆ ಗ್ರಾಮದ ಒಂದು ಮನೆಯ ಮುಂದೆ ನಿಂತು, "ಅಯ್ಯಾ, ನಾನೊಬ್ಬ ವೈಷ್ಣವ. ನೀವು ಕೂಡಾ ವೈಷ್ಣವರಾದರೆ ಈ ರಾತ್ರಿ ನಿಮ್ಮ ಮನೆಯಲ್ಲಿ ಸ್ಥಳಕೊಡಿ" ಎಂದನು.

"ಕ್ಷಮಿಸಿ! ನಾನು ವೈಷ್ಣವನಲ್ಲ. ನನ್ನಂಥ ನೀಚನ ಮನೆಯಲ್ಲಿ ಆಶ್ರಯ ಪಡೆದು ನೀವು ಮೈಲಿಗೆ ಯಾಗಬಾರದು" ಎಂದ ಆ ಮನೆಯ ಯಜಮಾನ.

ವೈಷ್ಣವಾಚಾರ್ಯನು ಮತ್ತೊಂದು ಮನೆಗೆ ಹೋಗಿ, ಹಾಗೆಯೇ ಕೇಳಿ, ಆ ಮನೆಯವರು ಕೂಡಾ ವೈಷ್ಣವರಲ್ಲವೆಂದು ತಿಳಿದುಕೊಂಡನು. ಎಷ್ಟು ಮನೆಗೆ ಹೋದರೂ ಒಂದು ಮನೆಯೂ ವೈಷ್ಣವರದಲ್ಲವೆಂದು ತಿಳಿಯ ಬಂತು!

ವೈಷ್ಣವಾಚಾರ್ಯನು ಒಬ್ಬ ದಾರೀ ಹೋಕನನ್ನು ನಿಲ್ಲಿಸಿ, "ಈ ಗ್ರಾಮದಲ್ಲಿ ಎಲ್ಲರೂ ವೈಷ್ಣವರೇ ಎಂದು ಕೇಳಿದೆ. ಆದರೆ ಪ್ರತಿಯೊಬ್ಬರೂ ತಾವು ವೈಷ್ಣವರಲ್ಲವೆನ್ನುತ್ತಾರಲ್ಲಾ?" ಎಂದನು.

"ಅಯ್ಯಾ, ಇಲ್ಲಿರುವವರೆಲ್ಲರೂ ವೈಷ್ಣವರೇ. ಆದರೆ ವಿಷ್ಣುಭಕ್ತರಿಗೆ ಅಹಂಕಾರ ಕೂಡದು. ನಾನು ವೈಷ್ಣವನೆಂದರೆ ಯಾರೂ ಆತಿಥ್ಯಕೊಡರು. ಬೇರೆ ವಿಧವಾಗಿ ಕೇಳಿ ನೋಡಿ" ಎಂದ ದಾರೀ ಹೋಕ.

ವೈಷ್ಣವಾಚಾರ್ಯನು ಒಂದು ಮನೆಗೆ ಹೋಗಿ, "ಅಯ್ಯಾ, ನಾನೊಬ್ಬ ಪರಮ ನೀಚ. ನನಗೆ ಆಶ್ರಯ ಕೊಡುವಿರಾ?" ಎಂದು ಕೇಳಿದ. "ಒಳಗೆ ಬನ್ನಿ" ಎಂದ ಗೃಹಸ್ಥ.

★ ★ ★

ಮೇಲಿನ ಕಥೆಗೆ ಒಳ್ಳೆಯ ಹೆಸರನ್ನು ಆಲೋಚನೆ ಮಾಡಿ, ಪೋಸ್ಟುಕಾರ್ಡಿನಲ್ಲಿಯೇ ನಿಮ್ಮ ಹೆಸರು ವಿಳಾಸದೊಂದಿಗೆ ಬರೆದು, "ಕಥಾ ಶೀರ್ಷಿಕೆಯ ಸ್ಪರ್ಧೆ" ಚಂದಮಾಮ, ೨ & ೩, ಆರ್ಕಾಟ್ ರೋಡು, ವಡಪಳನಿ, ಮದ್ರಾಸು - ೬೦೦೦೨೬ ಎಂಬ ವಿಳಾಸಕ್ಕೆ ಕಳುಹಿಸಿರಿ.

ಇದು ಆಗಸ್ಟ್ ೧೫ರೊಳಗೆ ತಲಪಬೇಕು. ಅದರಲ್ಲಿ "ಫೋಟೋ ಶೀರ್ಷಿಕೆಯ ಸ್ಪರ್ಧೆ" ಬರೆದಿರಬಾರದು. ಫಲಿತಾಂಶ '೭೮ ಅಕ್ಟೋಬರ್ ಚಂದಮಾಮದಲ್ಲಿ ಪ್ರಕಟವಾಗುತ್ತದೆ.

---

ಜೂನ್ ಸ್ಪರ್ಧೆಯ ಫಲಿತಾಂಶ: **ಗುಟ್ಟು ಅವರಂಥವರಿಗೇ ಗೊತ್ತು**

ಕಳುಹಿಸಿದವರು: **ಪಿ. ಸರಸ್ವತಿ, ಶಾನುಭಾಗರ ಮನೆ, ಕಿನ್ನಿಗೋಳಿ-ದ. ಕ.**

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೭೮ರ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Azmat A. Syed



Azmat A. Syed

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಆಗಸ್ಟ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಜೂನ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : “ದುಡಿಮೆಯನ್ನು ನಂಬಿ,

ಎರಡನೇ ಫೋಟೋ: ಅಡಿಗೆ ಮಾಡಿರಿ”

ಕಳುಹಿಸಿದವರು : ಹೆಚ್. ಡಿ. ಹರ್ಟಿ,

ಲಕ್ಕುಂಡಿ, ಗದಗ, ಧಾರವಾಡ, ಕರ್ನಾಟಕ

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 - (India). Controlling Editor : NAGI REDDI.






ನಾನು ನನ್ನ ಈಕೋ
ಸ್ಕೆಚ್ ಪೆನ್‌ನಿಂದ ಈ
ರೂಪರೇಖೆಗಳನ್ನು ಗಿಚಿದ್ದು

**EKCO**

ಸ್ಕೆಚ್ ಪೆನ್

ಬಣ್ಣಗಳೆಂದರೆ ಮಕ್ಕಳಿಗೆ ಅಚ್ಚುಮೆಚ್ಚು. ಬಣ್ಣಗಳಿಂದ ಚಿತ್ರ ತೆಗೆಯುವುದೆಂದರೆ ಅವರಿಗೆ ಬಲು ಪ್ರೀತಿ. ನಿಮ್ಮ ಮಕ್ಕಳಲ್ಲಿ ಸುಪ್ತವಾಗಿರುವ ಕಲೆಯು ಹೊರಹೊಮ್ಮಲು ನೆರವಾಗಿರಿ. ಅವರಿಗೆ ಒಂದು ಎಕ್ಕೊ ಸ್ಕೆಚ್ ಪೆನ್ನಿನ ಆಕರ್ಷಕ ಪ್ಯಾಕನ್ನು ತಂದುಕೊಡಿರಿ. ಅವು ಮನಮೋಹಕ ಬಣ್ಣಗಳಲ್ಲಿ ದೊರೆಯುತ್ತವೆ.




ಹಂಚಿಕೆದಾರರು : ಕಿರಣ ಅಂಡ್ ಕಂಪನಿ
73/75 ಪಾವುಶೇಟ್ ಸ್ಟ್ರೀಟ್, ಮುಂಬಯಿ 400 002
ಟೆಲಿಫೋನ್: 324432

ಎಕ್ಕೊ ಸ್ಕೆಚ್ ಪೆನ್ನುಗಳಿಂದ ಬರೆಯುವುದೇ
ಒಂದು ಆನಂದ

ADVERTS/WP/216/K/68



# ಕರಡಿಕೆಂಗಣ್ಣಿ

ಒಂದಾನೊಂದು ಕಾಲದಲ್ಲಿ ಬ್ರಹ್ಮಪುತ್ರಾ ನದೀ ತೀರವು ಮಹಾರಣ್ಯಗಳಿಂದ ಮುಚ್ಚಿಕೊಂಡಿದ್ದಿತು. ಆ ಅರಣ್ಯಕ್ಕೆ ಸೇರಿದ ಬಿಡಿಗಾಡುಗಳಲ್ಲಿ ಅಲ್ಲಲ್ಲಿ ಕೆಲವು ಗ್ರಾಮಗಳಿದ್ದುವು.

ಅಂತಹ ಒಂದು ಗ್ರಾಮದಲ್ಲಿ ಕಾಳೀವರ್ಮನೆಂಬ ಕ್ಷತ್ರಿಯ ಯುವಕನೊಬ್ಬನಿದ್ದನು. ಅವನು ಎಲ್ಲದರಲ್ಲಿಯೂ ಸಾಧಾರಣ ಗ್ರಾಮನಿವಾಸಿಗಳಿಗಿಂತ ಬೇರ್ಪಟ್ಟೇ ಕಾಣುತ್ತಿದ್ದನು.

ಅವನ ತಂದೆ ಮಹಾಯೋಧನಾಗಿದ್ದು, ಚಂದ್ರಶಿಲಾ ನಗರದ ರಾಜನ ದರ್ಬಾರಿನಲ್ಲಿ ಸೈನಿಕ ಮುಖಂಡನಾಗಿದ್ದವನು. ಕಾಳೀವರ್ಮ ಹತ್ತು ವಯಸ್ಸಿನ ಹುಡುಗನಾಗಿದ್ದಾಗಲೇ ಅವನ ತಂದೆ ಯುದ್ಧದಲ್ಲಿ ವೀರಮರಣ ಹೊಂದಿದ್ದನು. ಗಂಡನನ್ನು ಕಳೆದುಕೊಂಡ ದುಃಖದಲ್ಲಿ ಅವನ ತಾಯಿಯೂ ಬೇಗದಲ್ಲೇ ತೀರಿಹೋಗಿ ಕಾಳೀವರ್ಮನು ಅನಾಥನಾದನು. ಕಡೆಗೆ ಬಲಭದ್ರನೆಂಬ ವಿಶ್ವಾಸಪಾತ್ರನಾದ ನೌಕರನೊಬ್ಬ ಕಾಳೀವರ್ಮನನ್ನು ಆದರಿಸಿ, ಬೆಳೆಸಿ ಕ್ಷತ್ರಿಯರಿಗೆ ಅಗತ್ಯವಾದ ಎಲ್ಲಾ ವಿದ್ಯೆಗಳನ್ನೂ ಕಲಿಸಿದನು. ವೀರರಕ್ತದ ಕಾಳೀವರ್ಮನು ಅಂತಹ ವಿದ್ಯೆಗಳನ್ನು ಉತ್ಸಾಹದಿಂದ ಕಲಿತು ಒಳ್ಳೆಯ ನಿಪುಣತೆಯನ್ನೂ ಪಡೆದನು.

ಕಾಳೀವರ್ಮನಿಗೆ ಇಪ್ಪತ್ತು ವಯಸ್ಸು ತುಂಬಿದ ಕೂಡಲೇ ಬಲಭದ್ರನು ಅವನೊಂದಿಗೆ, "ಕಾಳೀ, ನಿನ್ನಂಥವನಿಗೆ ಇನ್ನು ಈ ಕುಗ್ರಾಮವು ಯೋಗ್ಯವಲ್ಲ. ರಾಜಧಾನೀ ನಗರಕ್ಕೆ ಹೋಗಿ ಅಲ್ಲಿ ಮಹಾರಾಜರ ಮುಂದೆ ನಿನ್ನ ಯೋಗ್ಯತೆಯನ್ನು ಪ್ರದರ್ಶಿಸಿ, ಏನಾದರೂ ಉದ್ಯೋಗ ಸಂಪಾದಿಸಿ, ಮುಂದಕ್ಕೆ ಬರಬೇಕಾದವನು." ಎಂದನು.

ಕಾಳೀವರ್ಮನಿಗೆ ಇತ್ತೀಚೆಗೆ ಅಂತಹ ಆಲೋಚನೆಯೇ ಪ್ರಾರಂಭವಾಗಿತ್ತು. ಅದು ತಂದೆಯಂತಹ ಬಲಭದ್ರನ ಬಾಯಿಯಿಂದಲೇ ಬರಬೇಕೆಂದು ಕಾದಿದ್ದನು. ಆದರೆ ಆ ಪ್ರಾಂತವನ್ನು ಪಾಲಿಸುವ ಜಿತಕೇತು ರಾಜನೊಂದಿಗೆ ಪ್ರಾರ್ಥಿಸಲು ಅವನಿಗೆ ಇಷ್ಟವಿರಲಿಲ್ಲ. ಆ ರಾಜನ ಮೇಲೆ ಅವನಿಗೆ ಸ್ವಲ್ಪವೂ



ಗೌರವವಿರಲಿಲ್ಲ. ರಾಜನು ಕುಗ್ರಾಮಗಳಿಂದ ಕೂಡ ಬಲವಂತಮಾಡಿಯಾದರೂ ತೆರಿಗೆ ವಸೂಲು ಮಾಡಿಸಿಕೊಳ್ಳುವುದರಲ್ಲಿ ಸಮರ್ಥನೇನೋ ನಿಜ. ಆದರೆ ಗ್ರಾಮವಾಸಿಗಳ ಕ್ಷೇಮಚಿಂತನೆ ಅವನಿಗೆ ಸ್ವಲ್ಪವೂ ಇಲ್ಲ. ವನ್ಯಮೃಗಗಳ ಕಾಟದಿಂದಲೂ, ದಾರಿದೋಚುವ ದರೋಡೆಗಾರರಿಂದಲೂ ಬಡಪ್ರಜೆಗಳನ್ನು ಕಾಪಾಡಲು ಅವನೇನೂ ಮಾಡಿಲ್ಲ.

ಕಾಳೀವರ್ಮನು ಆ ರಾಜನ ಮೇಲೆ ತನಗಿರುವ ಅತೃಪ್ತಿಯನ್ನು ಬಲಭದ್ರನೊಂದಿಗೆ ಹೇಳಿ, "ನಮ್ಮ ಚಂದ್ರಶಿಲಾ ನಗರದ ಜಿತಕೇತು ರಾಜನು ತುಂಬ ಅಸಮರ್ಥನು. ಅಷ್ಟೇ ಅಲ್ಲ, ಹೇಡಿ ಎಂತಲೂ ಕಾಣುತ್ತದೆ. ಆದರ ಮೇಲೆ ಗುಣವೂ ಒಳ್ಳೆಯದಲ್ಲ. ಅಂಥವನ ಸೇವೆ ಮಾಡಿ ಹೊಟ್ಟೆ ತುಂಬಿಸಿಕೊಳ್ಳುವುದೆಂದರೆ ನನಗೆ ತುಂಬ ಅವಮಾನವೆನಿಸುತ್ತದೆ. ಅದಕ್ಕಿಂತ ಬೇರೇನಾದರೂ ಮಾಡಬೇಕೆಂದಿದ್ದೇನೆ" ಎಂದನು. ವೃದ್ಧನಾದ ಬಲಭದ್ರನು ಸ್ವಲ್ಪಹೊತ್ತು ಆಲೋಚನೆ ಮಾಡಿ, "ಇದಕ್ಕೆಲ್ಲಾ ರಾಜನೇ ಬಾಧ್ಯನೆಂದು ಹೇಳಲಿಕ್ಕಾಗುವುದಿಲ್ಲ. ರಾಜ್ಯ ಪರಿಪಾಲನೆಯ ದಕ್ಷತೆಯ ಬಹಳ ಪಾಲು, ಆತನ ಆಸ್ಥಾನದಲ್ಲಿರುವ ಉದ್ಯೋಗಸ್ಥರ ಮೇಲೆಯೇ ಹೆಚ್ಚಾಗಿ ಆಧಾರಪಡುತ್ತದೆ. ಜಿತಕೇತು ರಾಜನ ತಂದೆ ತುಂಬ ಪರಾಕ್ರಮಶಾಲಿ. ನಿನ್ನ ತಂದೆಯಂತಹ ಮಹಾ ಪ್ರತಾಪಿಗಳೂ, ಬುದ್ಧಿವಂತರೂ ಆತನ ದರಬಾರಿನಲ್ಲಿದ್ದರು. ಆ ರಾಜನು ತೀರಿಹೋದ ಮೇಲೆ ಜಿತಕೇತು ಸಿಂಹಾಸನವನ್ನೇರಿದನು. ಈಗ ಅವನ ಸುತ್ತಲೂ ಕೇವಲ ಕುಕ್ಷಿಂಭರರೂ, ಹೊಗಳುಬಂಟರೂ, ಹರಟೆಹೊಡಕರೂ ಸೇರಿಕೊಂಡಿರಬೇಕೆಂದು ನನಗೆ ತೋರುತ್ತದೆ" ಎಂದನು.

"ಇರಬಹುದನ್ನಿ. ಅಂತಹ ರಾಜನನ್ನು ನಾನೊಬ್ಬನು ಉದ್ಧಾರಮಾಡಲು ಸಾಧ್ಯವೇ? ಹಾಗೆ ಹೋಗುವುದಕ್ಕಿಂತ, ಈ ಗ್ರಾಮದಲ್ಲೇ ನೆಲವನ್ನು ಉತ್ತು ಹೊಲತೋಟ ಮಾಡಿ ಜೀವಿಸಬಹುದಲ್ಲ?" ಎಂದ ಕಾಳೀವರ್ಮ.

"ಇಂಥಾ ಕೆಲಸವನ್ನು ನಿನ್ನಂಥ ವೀರರು ಮಾಡತಕ್ಕದಲ್ಲ. ಅದರ ಮೇಲೆ ನಿನ್ನ ತಂದೆ ಸಾಯುವ ಮೊದಲು, ತನ್ನ ಕೊನೆಯ ಕೋರಿಕೆಯಾಗಿ ಏನು ಹೇಳಿದ್ದಾರೆ ಗೊತ್ತೊ?" ಎಂದು ಬಲಭದ್ರನು ಮನೆಯೊಳಗೆ ಹೋಗಿ, ಕಾಳೀವರ್ಮನನ್ನು ಕರೆದುಕೊಂಡು, ಎಂದಿಗೂ ತೆರೆಯದ ಒಂದು ಕೋಣೆಯ ಬೀಗವನ್ನು ತೆರೆದನು. ಕಾಳೀವರ್ಮನ ಕೈಹಿಡಿದು ಅದರೊಳಗೆ ಕರೆದೊಯ್ದನು.

ಆ ಕೋಣೆಯಲ್ಲಿ ಕಾಳೀವರ್ಮನ ತಂದೆ ಉಪಯೋಗಿಸಿದ ಬಗೆಬಗೆಯ ಆಯುಧಗಳೂ, ಕವಚವೂ ಇದ್ದುವು. ಬಂಗಾರದ ಹಿಡಿಯ ಖಡ್ಗವೊಂದು ಕಾಳೀವರ್ಮನ ಕಣ್ಣನ್ನು ಸೆಳೆಯಿತು. ಅಷ್ಟರಲ್ಲಿ ಬಲಭದ್ರನು ಆ ಕತ್ತಿಯನ್ನು ಕಾಳೀವರ್ಮನ ಸೊಂಟಕ್ಕೆ ತಗಲಿಸಿ, ಕವಚವನ್ನು ತೊಡಿಸಿ, "ಆಹ! ನಿನ್ನ

ತಂದೆಗೆ ಹೊಂದಿಕೆಯಾದಂತೆಯೇ ಇವು ನಿನಗೂ ಸರಿಯಾಗಿವೆ. ನೀನು ಕ್ಷತ್ರಿಯ ಯೋಧನಾಗಿ ತನಗೆ ತಕ್ಕ ಮಗನೆಂದು ಹೆಸರು ಪಡೆಯಬೇಕೆಂಬುದು ನಿನ್ನ ತಂದೆಯ ಇಚ್ಛೆ. ಅದಕ್ಕೆ ತಕ್ಕಂತೆ ನಿನ್ನನ್ನು ತಯಾರಿಸಲು ನನಗೆ ಆಜ್ಞೆಮಾಡಿದ್ದಾರೆ. ನೀನೂ ಮಹಾ ವೀರನೆನ್ನಲು ಸಂದೇಹವೇನಿಲ್ಲ. ಇನ್ನು ನಿನ್ನ ಇಷ್ಟ!" ಎಂದು ಹೇಳಿದನು.

ತಂದೆ ತನಗಾಗಿ ಬಿಟ್ಟುಹೋಗಿರುವ ಕವಚವನ್ನೂ ಕತ್ತಿಯನ್ನೂ ಧರಿಸಿದ ಕೂಡಲೇ ಕಾಳೀವರ್ಮನ ಶರೀರವು ಆನಂದಪುಳಕಿತವಾಯಿತು. ಹೃದಯ ಉಕ್ಕಿತು. ಅವನು ಒರೆಯಿಂದ ಕತ್ತಿಯನ್ನು ಎಳೆದು ಅದರ ಹರಿತವನ್ನು ಪರೀಕ್ಷಿಸಿ, ಅದರ ಥಳಥಳಿಕೆಗೆ ಆಶ್ಚರ್ಯಪಡುತ್ತ "ಭದ್ರಯ್ಯಾ, ತಂದೆಯ ಆಜ್ಞೆಯನ್ನು ಶಿರಸಾವಹಿಸುತ್ತೇನೆ. ನನ್ನ ಭವಿಷ್ಯತ್ತನ್ನು ತಿದ್ದಿತೀಡಿ ಮುಂದುವರಿಯುವಂತೆ ಮಾಡಬೇಕಾದುದು ಬಡ್ಡುನೇಗಿಲಲ್ಲವೆಂಬುದು ನಿಜ. ಹದನಾದ ಕತ್ತಿಯೇ!" ಎಂದನು.

ಅವನ ಉತ್ಸಾಹದ ಮಾತು ಕೇಳಿ ಬಲಭದ್ರನಿಗೆ ಸಂತೋಷವಾಯಿತು. ಮರುದಿನವೇ ಕಾಳೀವರ್ಮನು ಚಂದ್ರಶಿಲಾನಗರಕ್ಕೆ ಪ್ರಯಾಣ ಮಾಡಲು ಬೇಕಾದ ಎಲ್ಲಾ ಸಿದ್ಧತೆಗಳನ್ನೂ ಮಾಡಿದನು.

ಕಾಳೀವರ್ಮನು ಕವಚ ಧರಿಸಿ, ಕತ್ತಿಯನ್ನು ನಡುವಿಗೆ ನೇತಾಡಿಸಿಕೊಂಡು ಸಿದ್ಧನಾದನು. ದಾರೀ ಖರ್ಚಿಗಾಗಿ ಬಲಭದ್ರನು ಕೊಟ್ಟ ನೂರು ಬಂಗಾರದ ನಾಣ್ಯವನ್ನು ತೆಗೆದುಕೊಂಡು ಕುದುರೆಯನ್ನೇರಿ ಹೊರಟನು. ರಾಜನ ಆಸ್ಥಾನದಲ್ಲಿ ಸೇರಿದ ಮೇಲೆ ಆರು ತಿಂಗಳಲ್ಲಿ ಹಿಂದಿರುಗಿ ಬಂದು ನೋಡುವೆನೆಂದು ಬಲಭದ್ರನಿಗೆ ಮಾತು ಕೊಟ್ಟನು.

ಅರಣ್ಯದ ಕಾಲುದಾರಿಯನ್ನು ಹಿಡಿದು ಕಾಳೀವರ್ಮನ ಪ್ರಯಾಣ ಸಾಗಿತ್ತು. ನಡುಮಧ್ಯಾಹ್ನದ ವರೆಗೆ ಸುಗಮವಾಗಿ ಸಾಗಿದನು. ಇನ್ನು ಎಲ್ಲಾದರೂ ನೀರಿರುವಲ್ಲಿ ಕುಳಿತು, ಬುತ್ತಿಗಂಟು ಬಿಚ್ಚಿಕೊಳ್ಳಬೇಕೆಂದು ಅತ್ತಿತ್ತ ನೋಡುತ್ತ ದಾರಿಬಿಟ್ಟು ಸ್ವಲ್ಪದೂರ ಕುದುರೆಯನ್ನು ತಿರುಗಿಸಿಕೊಂಡು ಹೋದನು. ಆಗ ಒಂದು ಮರದ ಮೇಲಿನಿಂದ ಯಾವನೋ ನರಳುವ ಸದ್ದು ಕೇಳಿಸಿತು.



ಕಾಳೀವರ್ಮ ಆಶ್ಚರ್ಯಪಡುತ್ತ ಕುದುರೆಯನ್ನು ನಿಲ್ಲಿಸಿ ಮರದ ಮೇಲಕ್ಕೆ ದೃಷ್ಟಿ ಹಾಯಿಸಿದನು. ಆಗ ಮರದ ಕೊಂಬೆಗಳೆಡೆಯಿಂದ ಮಾನವಾಕಾರವೊಂದು "ಒಯ್ಯಮ್ಮೋ!" ಎಂದು ಕೂಗುತ್ತ ಪರಪರನೆ ಜಾರಿ ಪಟ್ಟುತಪ್ಪಿ ನೆಲದ ಮೇಲೆ ಬಿತ್ತು.

ಕಾಳೀವರ್ಮ ತಟ್ಟನೆ ಕುದುರೆಯಿಂದಿಳಿದು ಆ ಮನುಷ್ಯನ ಬಳಿಗೆ ಹೋದನು. ಅವನೊಬ್ಬ ನಡುವಯಸ್ಸು ಮೀರಿದ ಮನುಷ್ಯ. ಬಿದ್ದುದರಿಂದ ದೊಡ್ಡ ಪೆಟ್ಟು ಗಾಯಗಳಾದಂತೆ ಕಾಣಲಿಲ್ಲ. ಅವನು ಎದ್ದು ನಿಲ್ಲಲು ಪ್ರಯತ್ನಪಡುತ್ತ, ಏಳಲಾಗದೆ ಸೊಂಟ ಹಿಡಿದುಕೊಂಡು "ಅಮ್ಮಾ!



ಕೊಡಲಿಲ್ಲ ನೀವು. ಜೇನು ಹುಟ್ಟು ಇದೆಯೋ ಅಂತ ಕೇಳಿದೆನಲ್ಲಾ? ಇದ್ದರೆ ನಾನು ಹತ್ತಿ ತೆಗೆದು ಕೊಡುತ್ತೇನೆ. ನಿಮ್ಮ ಕೈಕಾಲು ಮುರಿಯದೇ ಹೋದದ್ದು ಅದೃಷ್ಟ!" ಎಂದ ಕಾಳೀವರ್ಮ.

ಮುದುಕ ಏನೂ ಹೇಳದೆ ಎದ್ದು ನಿಂತ. ಆಮೇಲೆ ನಾಲ್ಕಾರು ಅಡಿಗಳನ್ನಿಟ್ಟು ಹಿಂದೆ ಮುಂದೆ ನಡೆದ. ತೃಪ್ತಿಯಾಗಿ ತಲೆಯಾಡಿಸುತ್ತ, "ಜೇನು ಹುಟ್ಟು ಅಂಥಾದ್ದೇನಿಲ್ಲ ಬಿಡಪ್ಪ. ಹೌದಪ್ಪ, ನೀನು ಹೇಳಿದ ಹಾಗೆ ನಾನು ಅದೃಷ್ಟವಂತನೇ. ಹಾಗಿಲ್ಲದಿದ್ದರೆ ಈಸಾರಿ ದರೋಡೆಕೋರರು ನಮ್ಮ ಊರ ಮೇಲೆ ಬಿದ್ದಾಗ, ನಾನು ಮನೆಯಲ್ಲಿದ್ದಿದ್ದರೆ ಬದುಕಿ ಉಳಿಯು ತ್ತಿರಲಿಲ್ಲಪ್ಪ" ಎಂದನು.

ಮುದುಕ ಹೇಳಿದ ಈ ಮಾತನ್ನು ಕೇಳಿ ಕಾಳೀ ವರ್ಮನಿಗೆ ನಡೆದ ಸಂಗತಿ ಏನೆಂಬುದು ಸ್ವಲ್ಪ ಮಟ್ಟಿಗೆ ಅರ್ಥವಾಯಿತು. ಈ ಮುದುಕನು ಊರಿಗೆ ಬಿದ್ದ ಕಳ್ಳರ ಗುಂಪನ್ನು ನೋಡಿ ಹೆದರಿ ತಪ್ಪಿಸಿ ಕೊಂಡು ಕಾಡಿನೊಳಗೆ ಬಂದು ಮರದ ಮೇಲೆ ಹತ್ತಿ ಅಡಗಿದ್ದಾನೆ.

"ಮರದ ಮೇಲಿನಿಂದ ಹಾಗೆ ಬೀಳಲಿಕ್ಕೇ ನಾಯಿತು? ಏನಾದರೂ ಹಾವು ಹಲ್ಲಿ?" ಎಂದು ಕಾಳೀವರ್ಮ ಹೇಳುತ್ತಲೇ, "ಹೌದಪ್ಪ. ಸಣ್ಣಸಣ್ಣ ಎಂಥದೋ ಹಾವುಗಳನ್ನು ನೋಡಿ ಹೆದರಿ ಅವಸರ ದಿಂದ ಇಳಿಯುವಾಗ ಪಟ್ಟು ತಪ್ಪಿತು" ಎಂದ ಮುದುಕ.

"ತಾತಾ, ಈ ಪ್ರಾಂತದಲ್ಲಿ ದರೋಡೆಕೋರರ ಕಾಟ ತುಂಬಾ ಹೆಚ್ಚೆಂದು ನಾನೂ ಕೇಳಿದೆ. ಆದರೆ ಅವರು ಹೀಗೆ ಹಾಡ ಹಗಲಲ್ಲೇ ಊರ ಮೇಲೆ ಬಿದ್ದು ದೋಚುತ್ತಾರೆಂದು ತಿಳಿದಿರಲಿಲ್ಲ. ನಿಮ್ಮ ಜನರೆಲ್ಲಾ ಏನಾದರು? ಗಟ್ಟಿಮುಟ್ಟಾದ ಗಂಡುಸರೇ ಇರಲಿಲ್ಲವೆ?" ಎಂದು ಕೇಳಿದ ಕಾಳೀವರ್ಮ. "ದರೋಡೆಕೋರರು ಬರುವುದನ್ನು ನೋಡಿದ

ಅಬ್ಬ!" ಎಂದು ಮುಲುಗುತ್ತ ಕುಸಿಕುಳಿತನು. ಕಾಳೀವರ್ಮ ಅವನ ಬಳಿಯಲ್ಲಿ ಬಾಗಿ "ಏನು ತಾತಾ, ಈ ವಯಸ್ಸಿನಲ್ಲಿ ನೀವು ಈ ಕಾಡಿನೊಳಗೆ ಬರುವುದೆಂದರೇನು? ಮರದ ಮೇಲೆ ಹತ್ತುವು ದೆಂದರೇನು? ಮರದ ಕೊಂಬೆಯಲ್ಲಿ ಜೇನು ಹುಟ್ಟು ನೋಡಿದಿರೇನು? ಸಣ್ಣ ಮಕ್ಕಳ ಹಾಗೆ ಬಾಯಿ ಯಲ್ಲಿ ಜೊಲ್ಲಿಳಿಯಿತೇನು?" ಎಂದು ಕೇಳಿದನು.

ಮುದುಕ ಕಾಳೀವರ್ಮನ ಮುಖವನ್ನು ಸ್ವಲ್ಪ ಹೊತ್ತು ರೆಪ್ಪೆ ಬಡಿಯದೆ ನೋಡಿ, "ಅಪ್ಪಾ! ನಿನ್ನನ್ನು ನೋಡಿದರೆ ರಾಜಭಟನ ಹಾಗೆ ಕಾಣುವೆ. ಸಾಧಾರಣವಾಗಿ ತೆರಿಗೆ ವಸೂಲು ಮಾಡುವ ಕಾಲ ದಲ್ಲಿ ಹೊರತು ಬೇರೆ ಕಾಲದಲ್ಲಿ ನಿಮ್ಮಂಥವರು ಈಕಡೆ ಹಾಯುಲಾರರಷ್ಟೆ?" ಎಂದನು.

"ನಾನು ರಾಜಭಟನೇನಲ್ಲ ತಾತಾ. ಅಂಥದೇನಾ ದರೂ ಒಂದು ಉದ್ಯೋಗ ಸಂಪಾದಿಸಲಿಕ್ಕಾಗಿಯೇ ಹೊರಟಿದ್ದೇನೆ, ಅಷ್ಟೇ. ನಾನು ಕೇಳಿದ್ದಕ್ಕೆ ಉತ್ತರವೇ

ಕೂಡಲೇ ತಲಾ ಒಂದೊಂದು ದಿಕ್ಕಿಗೆ ಓಡಿ ಹೋದರು. ಕಳ್ಳರು ಸಿಕ್ಕಿದ್ದನ್ನೆಲ್ಲ ಕೊಳ್ಳೆಹೊಡೆದು ಕೊಂಡು ಹೋದ ಮೇಲೆ ಓಡಿದವರೆಲ್ಲ ಅವರವರ ಮನೆಗೆ ತಿರುಗಿ ಬರುತ್ತಾರೆ. ಇದು ನಮಗೆ ಮಾಮೂಲು ಪದ್ಧತಿಯ ಹಾಗಾಗಿದೆ" ಎಂದ ಮುದುಕ.

"ಈ ದರೋಡೆ ಸಮಾಚಾರವನ್ನು ಮಹಾರಾಜ ನಿಗೆ ಹೇಳಲೇ ಇಲ್ಲವೇನು? ಹೇಳುತ್ತಿದ್ದರೆ ರಾಜನು ಭಟರನ್ನು ಕಳುಹಿಸಿ ಅವರನ್ನೆಲ್ಲ ಬೇಟೆಯಾಡಿಸಿ ಬಿಡುತ್ತಿದ್ದನಲ್ಲ?" ಎಂದ ಕಾಳೀವರ್ಮ. ರಾಜನು ಎಂಥವನೆಂದು ಕಾಳೀವರ್ಮನಿಗೆ ಗೊತ್ತಿದ್ದರೂ, ಮುದುಕನು ಏನು ಉತ್ತರ ಕೊಡುವನೋ ನೋಡೋಣವೆಂದುಕೊಂಡು ಹೀಗೆ ಕೇಳಿದ್ದನು.

ತಾತ ಜೋಲುಮೋರೆ ಮಾಡಿ ಸಪ್ಪಗಿನ ದನಿ ಯಿಂದ, "ಅವರಿಗೆ ಸುದ್ದಿ ಹೇಳುವುದೇನಿದೆ? ನಮ್ಮ ಪೈರು ಕೊಯಿಲಿಗೆ ಬಂದ ಕೂಡಲೇ ರಾಜನಭಟರು ತಾವಾಗಿ ಬಂದು ಅರ್ಧ ಬೆಳೆ ಎತ್ತಿಕೊಂಡು ಹೋಗು ತ್ತಾರೆ. ಉಳಿದರ್ಧವನ್ನು ಸುತ್ತುಮುತ್ತಲಿರುವ ಗುಡ್ಡಗಳಲ್ಲಿ ಅಡಗಿರುವ ದರೋಡೆಕೋರರು ಬಂದು ಕೊಳ್ಳೇ ಹೊಡೆದುಕೊಂಡು ಹೋಗುತ್ತಾರೆ. ಇದೆಲ್ಲಾ ರಾಜನಿಗೆ ಗೊತ್ತೇ ಇರುವಾಗ ನಾವು ದೂರು ಹೇಳೋದರಲ್ಲಿ ಯಾವ ಅರ್ಥವೂ ಇಲ್ಲ" ಎಂದನು.

ಆ ಸಮಯಕ್ಕೆ ಮರಗಳ ಮರೆಯಿಂದ ನಾಲ್ಕು ಮಂದಿ ದರೋಡೆಕೋರರು ಮುಂದಕ್ಕೆ ಬಂದು, "ಭೇಷ್! ಭೇಷ್! ಈ ಮುದುಕ ಚೆನ್ನಾಗಿಯೇ ಹೇಳಿದ. ಇನ್ನು ಮುಂದೆ ಬೆಳೆದ ಪೈರಿನಲ್ಲಿ ರಾಜನ ಭಾಗವನ್ನು ಕೂಡಾ ನಾವೇ ಎತ್ತಿಕೊಂಡು ಹೋಗು ತ್ತೇವೆ" ಎಂದು ಹೇಳಿ ಕತ್ತಿಗಳನ್ನು ನೆಗಹಿ ಕಾಳೀ ವರ್ಮನನ್ನು ನೋಡಿ, "ಓಹ್! ಜೋರಾಗಿರುವೆ ಯಲ್ಲಾ! ಕವಚ, ಕತ್ತಿ, ಕುದುರೆ! ನಿನ್ನನ್ನು ನೋಡಿ ದರೆ ಸ್ವಲ್ಪ ಹಣದ ಗಂಟು ಕೂಡಾ ಇಟ್ಟುಕೊಂಡಿ ರುವವನ ಹಾಗಿದೆ. ಕುದುರೆಯ ಮೇಲಿರುವುದು ಹಣದ ಗಂಟು ತಾನೆ? ಎಲ್ಲಿ, ಆ ಹಣದ ಗಂಟನ್ನು ತಂದು ನಮ್ಮ ಮುಂದೆ ನೆಲದ ಮೇಲಿಟ್ಟು ನಾಲ್ಕು





ಹೆಜ್ಜೆ ಹಿಂದಕ್ಕೆ ನಡಿ ನೋಡುವಾ" ಎಂದರು. ಕಾಳೀವರ್ಮ ಕಳ್ಳರ ಕಡೆಗೆ ಒಂದು ತೀವ್ರ ನೋಟವನ್ನು ಬೀರಿ, ಕುದುರೆಯ ಬಳಿಗೆ ಹೋಗಿ ಅದರ ಬೆನ್ನಿನ ಮೇಲೆ ನೇತಾಡುತ್ತಿದ್ದ ರೊಟ್ಟಿಯ ಗಂಟನ್ನು ತಂದು ನೆಲದ ಮೇಲಿಟ್ಟು, ಎರಡು ಅಡಿ ಹಿಂದಕ್ಕೆ ನಡೆದನು.

ಕಳ್ಳರಲ್ಲೊಬ್ಬ ಆಶೆಯಿಂದ ಮುಂದಕ್ಕೆ ಬಗ್ಗಿ ಮೂಟೆಯನ್ನು ಎತ್ತಿಕೊಳ್ಳುವಾಗ, ಕಾಳೀವರ್ಮ ಮಿಂಚಿನ ವೇಗದಲ್ಲಿ ಕತ್ತಿ ಹಿರಿದು ಅವನ ತಲೆಯನ್ನು ಹಾರಿಸಿಬಿಟ್ಟನು. ಉಳಿದ ಮೂವರು ಕಳ್ಳರು ಸಿದ್ಧರಾಗುವುದರೊಳಗೆ ಅದೇ ವೇಗದಲ್ಲಿ ಕಾಳೀವರ್ಮನ ಕತ್ತಿ ಇಬ್ಬರ ಗುಂಡಿಗೆಯೊಳಗೆ ಹೊಕ್ಕು ಹೊಕ್ಕು ಹೊರ ಬಂದಿತ್ತು.

ಅಷ್ಟಾದ ಮೇಲೆ ನಾಲ್ಕನೇ ಕಳ್ಳ ಕೈಕಾಲು ಗೆಟ್ಟು ಪ್ರಾಣಭೀತಿಯಿಂದ ಕೂಗುತ್ತಾ ಓಡಲು ನೋಡಿದ. ಕಾಳೀವರ್ಮನು ಹಾರಿ ಹೋಗಿ ಅವನ ಜುಟ್ಟು ಹಿಡಿದೆಳೆದು ಸೊಂಟದ ಮೇಲೊಂದು ಒದೆ ಕೊಟ್ಟನು. ಅವನು ಧಡೀರನೆ ಬಿದ್ದು ಕೈಕಾಲು ಹೊಡೆದುಕೊಳ್ಳುತ್ತಾ ಕೂಗುವುದನ್ನು ನೋಡಿ, ಮುದುಕನು ಗಡಗಡ ನಡುಗುತ್ತ, "ಅಪ್ಪಪ್ಪಾ! ಇದೇನು ಸಾಹಸವೋ? ನಮ್ಮ ಊರಿನಲ್ಲಿ ನಿನಗಿಂತಲೂ ಹೆಚ್ಚು ಬಲಶಾಲಿಗಳಾದವರು ಕೂಡಾ ಹೀಗೆ ಮಾಡುವುದಿಲ್ಲಪ್ಪ. ಈವರೆಗೆ ಯಾವನೂ ಒಬ್ಬ ಕಳ್ಳನನ್ನು ಸಹಾ ಹೀಗೆ ಹೊಡೆದದ್ದಿಲ್ಲ! ಭಯ!" ಎಂದ.

"ಹಾಗೆ ಭಯಪಟ್ಟದ್ದರಿಂದಲೇ ಇವರೂ ಹೀಗೆ ಏರಿ ಹೋದರು. ಈಗ ನಾನು ಮಾಡಿದ ಕೆಲಸವನ್ನು ನಿಮ್ಮೂರಿನವರೆಲ್ಲಾ ಮಾಡುವ ಹಾಗೆ ಮಾಡಿಸಿಯೇ ನಾನು ರಾಜಧಾನಿಗೆ ಹೋಗೋದು. ಈಗ ನನಗೆ ಹಸಿವೆಯ ನೆನಪೂ ಹೋಯಿತು. ಈ ರೊಟ್ಟಿಯ ಗಂಟನ್ನು ತೆಗೆದುಕೊಂಡು ಮುಂದಿನಿಂದ ನಿಮ್ಮೂರಿಗೆ ನಡೆಯಿರಿ. ಈ ಕಳ್ಳನನ್ನೂ ಕುದುರೆಯನ್ನೂ ಸಾಗಿಸಿಕೊಂಡು ನಾನು ಹಿಂದಿನಿಂದ ಬರುತ್ತೇನೆ, ನಡೆಯಿರಿ" ಎಂದ ಕಾಳೀವರ್ಮ.

ಮುದುಕನೂ ಕಾಳೀವರ್ಮನೂ ಅಲ್ಲಿಂದ ಹೊರಡುತ್ತಿರುವಾಗ, ಕೆಲಮಂದಿ ಗ್ರಾಮಸ್ಥರು ಓಡೋಡುತ್ತಾ ಅಲ್ಲಿಗೆ ಬಂದು "ಏನಾಯಿತು ಅಜ್ಜಾ? ಸಾಯುವ ಹಾಗೆ ಕೂಗಿದವರು ಯಾರು?" ಎಂದು ಕೇಳಿದರು.

ಕಾಳೀವರ್ಮನು ಅವರನ್ನೆಲ್ಲ ನೋಡಿ ಅಸಹ್ಯದಿಂದ "ಓಹ್! ಮಹಾವೀರರ ಹಾಗೆ ಕೇಳಲಿಕ್ಕೆ ಬಂದಿರೇನು? ನಿಮಗೆಲ್ಲಾ ಕಣ್ಣು ಸರಿಯಾಗಿದೆಯಲ್ಲಾ? ಏನು ನಡೆಯಿತೆಂದು ಕಾಣುವುದಿಲ್ಲವೇನು? ಊರೊಳಗೆ ಕಳ್ಳರು ಬಿದ್ದರೆ, ಎಲ್ಲರೂ ಒಟ್ಟಾಗಿ ಸೇರಿ ಅವರನ್ನು ಓಡಿಸುವುದನ್ನು ಬಿಟ್ಟು, ಹೇಡಿಗಳ ಹಾಗೆ ಕಾಡಿಗೆ ಓಡಿಹೋಗುವ ನೀವು ಎಂಥ ಮನುಷ್ಯರೋ!" ಎಂದನು.

ಅವನ ಮಾತು ಕೇಳಿ ಎಲ್ಲರೂ ನಾಚಿಗೆಯಿಂದ ಮುಖಮುಖ ನೋಡಿ ತಲೆ ತಗ್ಗಿಸಿಕೊಂಡರು. ಮುದುಕನು ನಡೆದ ಸಂಗತಿಯನ್ನು ಅವರಿಗೆ ಹೇಳಿ, "ಈ ವೀರನು ಹೇಳಿದ್ದು ಸುಳ್ಳಲ್ಲ. ನಮ್ಮ ಗ್ರಾಮದಲ್ಲಿ ಮಾತ್ರವಲ್ಲ, ಸುತ್ತುಮುತ್ತಲಿನ ಗ್ರಾಮಗಳಲ್ಲಿರುವ, ನನ್ನಂತಹ ಮುದುಕರನ್ನು ಬಿಟ್ಟು, ಉಳಿದವರೆಲ್ಲ ಇವನು ಹೇಳಿದ ಹಾಗೆ ಕೇಳಬೇಕು. ಇವನನ್ನೇ ನಿಮ್ಮೆಲ್ಲರ ಮುಖಂಡನನ್ನಾಗಿ ಮಾಡಿಕೊಂಡು, ಗುಡ್ಡಗಾಡುಗಳಲ್ಲಿ ಅಡಗಿರುವ ದರೋಡೆಕೋರರನ್ನು ನಾಶಮಾಡಿ ಹಾಕಿರಿ ನೋಡುವಾ! ಇವನೊಬ್ಬನೇ ಕಣ್ಣುಮುಚ್ಚಿ ಬಿಡಿಸುವುದರೊಳಗೆ ಮೂರು ಮಂದಿಯನ್ನು ಹತಮಾಡಿದನಷ್ಟೆ? ನಾವು ಹೀಗೆ ಎಷ್ಟು ಕಾಲ ಇವರಿಗೆ ಹೆದರಿ ಕಾಡಿನಲ್ಲಿ ಅಡಗಿಕೊಳ್ಳೋಣ? ನಾವೆಲ್ಲಾ ಮನುಷ್ಯರುತಾನೇ? ಇಲಿ ಮೊಲಗಳಂಥ ಅಲ್ಪಪ್ರಾಣಿಗಳಲ್ಲವಷ್ಟೆ? ಮನುಷ್ಯರು! ಬುದ್ಧಿಯಿರುವ, ಬಲವಿರುವ ಮನುಷ್ಯರು! ಮನುಷ್ಯರೇ ಮನುಷ್ಯರಿಗೆ ಹೆದರಿ ಸಾಯುವುದೆಂದರೇನು?" ಎನ್ನುತ್ತ ಕೋಪಾವೇಶದಿಂದ ಗಡಗಡ ನಡುಗಿದನು.

ಕಾಳೀವರ್ಮ ಮುದುಕನ ಮಾತುಗಳನ್ನು ತಲೆಯಾಡಿಸುತ್ತಾ ಕೇಳಿ "ಭಲೆ! ನಾನು ಏನು ಹೇಳಬೇಕೆಂದಿದ್ದೇನೋ ಅದನ್ನು ತಾತಯ್ಯನೇ ಹೇಳಿದರು. ಈಗ ಕೈಗೆ ಸಿಕ್ಕಿದ ಈ ಕಳ್ಳನ ಮೂಲಕ ಉಳಿದ ಕಳ್ಳರ ಬಿಲಗಳು ಎಲ್ಲೆಲ್ಲಿದೆ ಎಂಬುದನ್ನು ತಿಳಿಯುವುದೇನೂ ಕಷ್ಟವಿಲ್ಲ. ನಿಮ್ಮಲ್ಲಿ ಕತ್ತಿ, ದೊಣ್ಣೆ, ಈಟಿ ಹಿಡಿಯಲು ಗೊತ್ತಿದ್ದವರು ನನ್ನ ಜತೆ ಬನ್ನಿ. ಎಂಟು ಹತ್ತು ದಿನಗಳಲ್ಲಿ ದರೋಡೆಕೋರರ ಹುಟ್ಟಡಗಿಸಿ, ನನ್ನ ದಾರಿ ಹಿಡಿದು ಹೋಗುತ್ತೇನೆ. ನನಗೆ ಇದಕ್ಕಿಂತ ಒಳ್ಳೆಯ ಕೆಲಸ ಬೇರೇನಿದೆ?" ಎಂದನು.

ಗ್ರಾಮದ ಜನರು ಕಾಳೀವರ್ಮನನ್ನು ಬಹಳ ಗೌರವದಿಂದ ತಮ್ಮ ಗ್ರಾಮಕ್ಕೆ ಕರೆದುಕೊಂಡು



ಹೋದರು. ದಾರಿಯಲ್ಲಿ ಇನ್ನೂ ಅನೇಕರು ಕಲೆತರು. ಕಾಳೀವರ್ಮನ ಕೆಲಸವನ್ನು ಕೇಳಿ ಎಲ್ಲರಿಗೂ ವೀರಾವೇಶ ಬಂದಿತು. ಎಲ್ಲರೂ ಉತ್ಸಾಹದಿಂದ ಅವನನ್ನು ಕರೆದುಕೊಂಡು ಹೋಗಿ ಉಪಚರಿಸಿ ಔತಣವಿಡಿಸಿದರು. ಆ ದಿನ ಸಾಯಂಕಾಲದಲ್ಲಿ ಕೆಲವು ಯುವಕರು ದೂರದೂರದ ಗ್ರಾಮಗಳಿಗೆ ಹೋಗಿ ಮತ್ತೆ ಕೆಲವು ಮಂದಿ ಯುವಕರನ್ನು ಕರೆದುಕೊಂಡು ಬಂದರು. ಅವರಿಗೆಲ್ಲ ಕಾಳೀವರ್ಮನು, ಕಳ್ಳರು ಬಿದ್ದಾಗ ಹೇಗೆ ಅವರನ್ನು ಇದಿರಿಸಬೇಕೆಂಬ ಕೆಲವಾರು ವಿವರಗಳನ್ನು ತಿಳಿಸಿ ಹೇಳಿದನು.

ಸಿಕ್ಕಿಬಿದ್ದ ಕಳ್ಳ ಹೆಚ್ಚೇನೂ ತಕರಾರು ಮಾಡದೆ ಯಾವ ಯಾವ ಗುಹೆಗಳಲ್ಲಿ, ಯಾವ ಯಾವ ಕಣಿವೆಗಳಲ್ಲಿ ಎಷ್ಟೆಷ್ಟು ಮಂದಿ ಕಳ್ಳರು ಅಡಗಿರುವರೋ, ಅಲ್ಲಿಗೆ ಹೋಗಲು ಯಾವ ಯಾವ ಕಡೆ ರಹಸ್ಯ ಮಾರ್ಗಗಳಿವೆಯೋ ಎಲ್ಲವನ್ನೂ ಕಾಳೀವರ್ಮನೊಂದಿಗೆ ಹೇಳಿಬಿಟ್ಟನು.

ಕಾಳೀವರ್ಮನು ಆ ಕಳ್ಳನನ್ನು ಬಂಧಿಸಿಡಿಸಿ, ಗ್ರಾಮಗಳ ಯುವಕರನ್ನು ಕರೆದುಕೊಂಡು ಹೋಗಿ, ಆಕಸ್ಮಿಕ ದಾಳಿ ಮಾಡಿ ಇದಿರುಬಿದ್ದ ಅನೇಕ ಕಳ್ಳರನ್ನು ಕೊಂದುಬಿಟ್ಟನು. ಅವನ ಕೈಯಲ್ಲಿ ಸಾಯದೆ ಉಳಿದವರು ಹೆದರಿ ತಪ್ಪಿಸಿಕೊಂಡು, ಆ ರಾಜ್ಯದ ಮೇರೆಯನ್ನು ದಾಟಿ, ಬೆಟ್ಟಗಳಾಚೆಗಿನ ಅರಣ್ಯದೊಳಗೆ ಓಡಿಹೋದರು.

ಹೀಗೆ ದರೋಡೆಗಾರರ ಬೇಟೆಯನ್ನು ಮುಗಿಸಿದ ಮೇಲೆ ಕಾಳೀವರ್ಮನು ಮತ್ತೆ ರಾಜಧಾನೀನಗರದ ಕಡೆಗೆ ತನ್ನ ಪ್ರಯಾಣ ಮುಂದುವರಿಸಿದನು. ಹದಿನೈದು ದಿನಗಳ ಮೇಲೆ ಅರಣ್ಯವನ್ನು ದಾಟಿ ಚಂದ್ರಶಿಲಾನಗರದ ಬಳಿಗೆ ತಲಪಿದನು. ಇನ್ನೂ ಸ್ವಲ್ಪ ದೂರ ಹೋದರೆ ನಗರವನ್ನು ಮುಟ್ಟಬಹುದು.

ಅಷ್ಟರಲ್ಲಿ ಒಂದು ಬೆಳಗ್ಗಿನ ಹೊತ್ತಿನಲ್ಲಿ ಹಠಾತ್ತಾಗಿ ಹತ್ತು ಜನ ಆಶ್ವೀಕಭಟರು ಅವನನ್ನು ಸುತ್ತಿಮುತ್ತಿಕೊಂಡರು. ಕಾಳೀವರ್ಮನಿಗೆ ಕತ್ತಿ ಹಿರಿಯಲಿಕ್ಕೂ ಸಮಯವಿರಲಿಲ್ಲ.

ಆಶ್ವೀಕರ ನಾಯಕನಂತಿರುವವನು ಅವನನ್ನು ದುರುಗುಟ್ಟಿ ನೋಡುತ್ತ, "ಕಾಳೀವರ್ಮನೆಂದರೆ ನೀನು ತಾನೇ? ದರೋಡೆಗಾರರನ್ನೆಲ್ಲ ರಾಜ್ಯದ ಮೇರೆ ದಾಟಿಸಿ ನೆರೆರಾಜ್ಯಕ್ಕೆ ಓಡಿಸಿದ ಮಹಾಶೂರ ನೀನು ತಾನೇ?" ಎಂದು ದಟ್ಟಿಸಿ ಕೇಳಿದನು.

"ಹೌದು. ಆ ಕೆಲಸ ಮಾಡಿದವನು ನಾನೇ. ಅಂತಹ ನನ್ನನ್ನು ಒಳ್ಳೆಯ ಗೌರವದಿಂದ ನಗರಕ್ಕೆ ಕರೆದೊಯ್ಯುವ ರೀತಿ ಹೀಗೇನು? ನಾನೇ ಒಬ್ಬ ದರೋಡೆಕೋರನೆಂಬ ಹಾಗೆ ಸುತ್ತುಮುತ್ತಿ ಹೆದರಿಸುತ್ತಿರುವಿರಲ್ಲ? ಏನಿದು ವಿಚಿತ್ರ?" ಎಂದು ಕೇಳಿದ ಕಾಳೀವರ್ಮ ಆಶ್ಚರ್ಯದಿಂದ.

ಇದಕ್ಕೆ ಆಶ್ವೀಕರ ನಾಯಕನು ಗಹಗಹಿಸಿ ನಕ್ಕು, "ನೀನು ಜಿತಕೇತು ಮಹಾರಾಜರಿಗೆ ಮಾಡಿದ ದ್ರೋಹವು ಸಾಮಾನ್ಯವಾದುದಲ್ಲ. ಇಲ್ಲಿಂದ ಓಡಿಹೋದ ಕಳ್ಳರು ನೆರೆರಾಜ್ಯದಲ್ಲಿ ದರೋಡೆ ಪ್ರಾರಂಭಿಸಿದ್ದಾರೆ. ಅಲ್ಲಿಯ ರಾಜ ನಮ್ಮ ರಾಜರೇ ಇದಕ್ಕೆ ಕಾರಣವೆಂದುಕೊಂಡು, ಚಂದ್ರಶಿಲಾನಗರದ ಮೇಲೆ ದಂಡೆತ್ತಿ ಬರುತ್ತಿದ್ದಾನಂತೆ! ಇದಿಷ್ಟಕ್ಕೂ ಕಾರಣನಾದವನು ನೀನು. ನಿನ್ನನ್ನು ಹಿಡಿದು ಗಲ್ಲಿಗೇರಿಸಿ ನಿನ್ನ ಶವವನ್ನು ಆ ರಾಜನಿಗೆ ಕಳಿಸಬೇಕೆಂದಿದ್ದೇವೆ, ತಿಳಿಯಿತೆ?" ಎಂದನು.

"ಒಳ್ಳೇ ಕತೆ! ನಿಮ್ಮ ಜಿತಕೇತು ರಾಜರ ಹಾಗೆಯೇ ನಿಮಗೂ ಬುದ್ಧಿ ಕೆಟ್ಟುಹೋಯಿತು!" ಎಂದವನೇ ಕಾಳೀವರ್ಮ ಕತ್ತಿ ಹಿಡಿಯ ಮೇಲೆ ಕೈ ಹಾಕಿದನು. ಅಷ್ಟರಲ್ಲಿ ಆಶ್ವೀಕರು ಅವನ ಮೇಲೆ ಬಿದ್ದು ಕೈಕಾಲುಗಳನ್ನು ಕಟ್ಟಿ ಕುದುರೆಯ ಮೇಲೆ ಹಾಕಿ, ನಗರದ ಕಡೆಗೆ ಹೊರಟರು. (ಇನ್ನೂ ಇದೆ)





# ವೀರಹನುಮಾನ್

ತ್ರೇತಾಯುಗವು ಹೊರಟುಹೋಯಿತು. ದ್ವಾಪರ ಯುಗವು ಪ್ರಾರಂಭವಾಗಿ ಕಾಲಚಕ್ರವು ತಿರುಗುತ್ತಿರಲು, ಯದು ವಂಶದಲ್ಲಿ ಕೃಷ್ಣನು ಜನಿಸಿದನು. ಅವನು ದ್ವಾಪರ ಯುಗದ ನಾಯಕನಂತೆ ಮೆರೆಯುತ್ತ ಕಂಸನೇ ಮೊದಲಾದ ದುಷ್ಟರನ್ನು ಸಂಹಾರ ಮಾಡಿ, ದ್ವಾರಕಾನಗರದಲ್ಲಿ ಎಂಟು ಮಂದಿ ರಾಣಿಯರೊಡನೆ ವಿರಾಜಿಸಿಕೊಂಡಿದ್ದನು. ಅವನ ಅಣ್ಣನಾದ ಬಲರಾಮನು ಯಾದವರಿಗೆ ನಾಯಕನಾಗಿ ರಾಜ್ಯ ಪಾಲನೆ ಮಾಡುತ್ತಿದ್ದನು. ಗರುತ್ಮಂತನು ಕೃಷ್ಣನಿಗೆ ವಾಹನವಾಗಿ ದ್ವಾರಕೆಯಲ್ಲೇ ಇದ್ದನು.

ಕೃಷ್ಣನ ಪತ್ನಿಯರಲ್ಲಿ ಸತ್ಯಭಾಮೆ ವೀರಪತ್ನಿ. ಕೃಷ್ಣನು ನರಕಾಸುರನನ್ನು ವಧಿಸಲು ಹೊರಟಾಗ ಸತ್ಯಭಾಮೆಯೂ ಅವನೊಂದಿಗಿದ್ದಳು. ಕೃಷ್ಣನೊಂದಿಗೆ ಯುದ್ಧದಲ್ಲಿ ಸತ್ಯಭಾಮೆ ಕೂಡಾ ಸಹಾಯ ಮಾಡಿದುದರಿಂದಲೇ ನರಕಾಸುರನ ವಧೆಯಾದುದರಿಂದ, ಕೃಷ್ಣನ ಅಷ್ಟಮಹಿಷಿಯರಲ್ಲಿ ತಾನೇ ಮೇಲಾದವಳೆಂಬ ಗರ್ವ ಸತ್ಯಭಾಮೆಯಲ್ಲಿತ್ತು.

ಒಂದು ದಿನ ನಾರದನು ದೇವಲೋಕದಿಂದ ದ್ವಾರಕೆಗೆ ಬರುವಾಗ ಅಪೂರ್ವವಾದ ಪಾರಿಜಾತ ಪುಷ್ಪವನ್ನು ತಂದು ರುಕ್ಮಿಣಿಗೆ ಕೊಟ್ಟನು. ಕೃಷ್ಣನ ನಿಜವಾದ ಅರ್ಧಾಂಗಿನಿಯಂತೆ ತಾನಿರುವಾಗ ತನ್ನ ಸವತಿ ರುಕ್ಮಿಣಿಗೆ ಅಪೂರ್ವ ಪುಷ್ಪವನ್ನು ಕಾಣಿಕೆ ಕೊಡುವುದೆಂದರೇನು ? ಎಂದು ಸತ್ಯಭಾಮೆಗೆ ಕೋಪ ಬಂತು.

ಅವಳ ಕೋಪವನ್ನು ತಣಿಸಲಿಕ್ಕಾಗಿ ಕೃಷ್ಣನು ಸತ್ಯಭಾಮೆಯೊಂದಿಗೆ ಗರುತ್ಮಂತನ ಮೇಲೇರಿಕೊಂಡು ದೇವಲೋಕಕ್ಕೆ ಹೋಗಿ ಪಾರಿಜಾತದ ವೃಕ್ಷವನ್ನೇ ಕಿತ್ತುಕೊಂಡು ಹಿಂದಿರುಗಿದನು.

ಆಗ ಇಂದ್ರನಿಗೆ ಕೋಪ ಬಂದು, ತನ್ನ ವಜ್ರಾಯುಧವನ್ನು ಗರುಡವಾಹನದ ಮೇಲೆ ಬೀಸಿ ಹೊಡೆದನು. ಗರುತ್ಮಂತನು ಆ ವಜ್ರಾಯುಧವನ್ನು ತನ್ನ ರೆಕ್ಕೆಗಳಿಂದ ಹೊಡೆದು ದೂರ ಬೀಸಿ ಒಗೆದನು. ಆದರಿಂದ ಗರುತ್ಮಂತನಿಗೂ ತಾನು ಇಂದ್ರನಿಗಿಂತ ಹೆಚ್ಚಿನ ಬಲಿಷ್ಠನೆಂಬ ಗರ್ವ ಉಂಟಾಯಿತು. ದ್ವಾರ

### ೪೬. ಕೃಷ್ಣಾಂಜನೇಯ ಯುದ್ಧ



ಕೆಗೆ ಬಂದ ಮೇಲೆ ಸತ್ಯಭಾಮೆ ಪಾರಿಜಾತ ವೃಕ್ಷವನ್ನು ತನ್ನ ವಠಾರದಲ್ಲಿ ನೆಡಿಸಿ ಇನ್ನಿಷ್ಟು ಹೆಮ್ಮೆಯಿಂದ ಬೀಗಿಕೊಂಡಳು.

ಬಲರಾಮನು ಕೂಡಾ ಹೆಚ್ಚಿನ ಬಲವನ್ನು ತೋರಿಸಿ ಗರ್ವಿಷ್ಠನಾದನು. ಮಹಾಬಲಿಷ್ಠರಾದ ಅನೇಕ ಮಂದಿ ದುಷ್ಟರನ್ನು ಬಲರಾಮನು ಕೊಂದಿದ್ದನು. ನರಕಾಸುರನ ಪ್ರಾಣ ಮಿತ್ರನಾದ ದ್ವಿದನೆಂಬ ಬಾಲವಿಲ್ಲದ ನರವಾನರನೊಬ್ಬನು ಅತಿಭಯಂಕರನಾಗಿ ಮುಗಿಬೀಳಲು, ಬಲರಾಮನು ತನ್ನ ಹಲಾಯುಧದಿಂದ ಅವನನ್ನು ಹತ ಮಾಡಿ, ತನ್ನ ಬಲ ಪರಾಕ್ರಮಕ್ಕೆ ಈಡು ಜೋಡಿಲ್ಲವೆಂದು ಗರ್ವಪಡತೊಡಗಿದರು.

ಹೀಗೆ ಸತ್ಯಭಾಮೆ, ಗರುತ್ಮಂತ, ಬಲರಾಮ ಇವರ ಗರ್ವವು ದಿನೇ ದಿನೇ ಹೆಚ್ಚಾಗುತ್ತಾ ಹೋಗುತ್ತಿದ್ದಿತು. ಅದನ್ನೆಲ್ಲ ಗುಣಿಸಿಕೊಂಡು ಕೃಷ್ಣನು ತಲೆದೂಗುತ್ತ, ಸಮಯ ಕಾದುಕೊಂಡಿದ್ದನು.

ಒಂದು ದಿನ ಗರುತ್ಮಂತನು ಒಬ್ಬ ನಾಗಬಾಲನನ್ನು ಕಬಳಿಸಬೇಕೆಂದು ಹಿಡಿಯಲು ಹೋದನು. ಅವನ ತಾಯಿ ಕಾಂಚನೇಲಾ ಎಂಬ ನಾಗಿಣಿಯಾಗಿದ್ದಳು. ಅವಳು ಗಭಾಲನೆ ತನ್ನ ಮಗುವನ್ನು ಎತ್ತಿಕೊಂಡು ಓಡಿದಳು.

ಗರುತ್ಮಂತನು ಅವಳ ಬೆಂಬತ್ತಿಕೊಂಡು ಹೋದನು. "ರಕ್ಷಿಸಿ ! ಕಾಪಾಡಿ !" ಎಂದು ಆರ್ತನಾದ ಮಾಡುತ್ತಾ ಓಡುವ ನಾಗಿಣಿಯ ಇದಿರಾಗಿ ನಾರದನು ಬಂದು, "ನಾಗಮ್ಮಾ, ಸೀದಾ ಗಾಂಧಮಾದನಕ್ಕೆ ಹೋಗಿ ರಾಮನಾಮ ಜಪಿಸಿಕೊಂಡಿರುವ ಹನುಮಂತನಿಗೆ ರಾಮರಾಮ ಎನ್ನುತ್ತ ಶರಣಾಗು. ನಿಮ್ಮಿಬ್ಬರನ್ನು ರಕ್ಷಿಸುವವನು ಅವನೊಬ್ಬನೇ. ಬೇಗ ಹೋಗು!" ಎಂದು ದಾರಿ ತೋರಿಸಿ ತನ್ನ ದಾರಿ ಹಿಡಿದು ಹೋದನು.

ನಾಗಿಣಿ ಕಾಂಚನೇಲಾ ತನ್ನ ಮಗನೊಂದಿಗೆ ರೊಯ್ಯನೆ ಹೋಗಿ ಗಂಧಮಾದನದಲ್ಲಿ ತಪಸ್ಸಿನಲ್ಲಿರುವ ಹನುಮಂತನ ಮುಂದೆ, ಶರಣು ಬಿದ್ದು "ರಕ್ಷಿಸು ! ಹನುಮಾ ! ರಾಮ ! ರಾಮಾ !" ಎಂದು ಕೂಗಿದಳು. ಹನುಮಂತನು ಕಣ್ಣು ಬಿಡಿಸಿ, "ಹೆದರಬೇಡ ! ನನ್ನ ಆಶ್ರಯದಲ್ಲಿ ನಿರ್ಭಯವಾಗಿರು" ಎಂದು ಅವಳಿಗೆ ಅಭಯವಿತ್ತನು.

ಗರುತ್ಮಂತನು ಅಲ್ಲಿಗೆ ಬಂದು ಆ ತಾಯಿಮಗಂದಿರನ್ನು ಹಿಡಿಯಲು ಹೋಗಲು, ಹನುಮಂತನು, "ಓ ಪಕ್ಷೀಂದ್ರಾ, ನಿನಗೆ ಹಸಿವಾಗಿದ್ದರೆ ನನ್ನನ್ನು ತಿವಿದು ತಿನ್ನು!" ಎಂದನು.

"ನಾಗ ಜಾತಿಯೇ ನನ್ನ ಆಹಾರ. ನೀನೊಬ್ಬ ಕೋತಿರಾಯ. ನನ್ನ ಆಹಾರ ನೀನಲ್ಲ, ಬಿಡು" ಎಂದು ಗರುಡನು ಹುಂಕರಿಸಿ, ಆಶ್ರಮದೊಳಗೆ ತೂರಲು ನೋಡಿದನು. ಆಗ ಹನುಮಂತನ ಬಾಲವು ಗರುತ್ಮಂತನ ರೆಕ್ಕೆಗಳನ್ನು ಹಿಡಿದು ಬಿಗಿಯಿತು. ಗರುತ್ಮಂತನ ಶಕ್ತಿ ಹುಲ್ಲಿಗೆ ಸಮನಾಯಿತು. ಹನು

ಮಂತನ ಬಾಲವು ಗರುತ್ಮಂತನನ್ನು ಎಳೆದು ಆಕಾಶಕ್ಕೆ ಎತ್ತಿ ಸುಳಿ ಸುಳಿಯಾಗಿ ಬೀಸಿ ಬಹುದೂರ ಎಸೆದು ಬಿಟ್ಟಿತು. ಹಾಗೆ ಎಸೆಯಲ್ಪಟ್ಟ ಗರುತ್ಮಂತನು ಬಾಣ ದೇಟು ತಿಂದ ಚಿಕ್ಕ ಹಕ್ಕಿಯ ಹಾಗೆ ದ್ವಾರಕಾನಗರ ದಲ್ಲಿರುವ ಬಲರಾಮನ ಮುಂದೆಯೇ ಹೋಗಿ ಧೊಪ್ಪನೆ ಬಿದ್ದನು.

ನಾಗಿಣಿ ಕಾಂಚನೇಲಾ ಹನುಮಂತನಿಗೆ ನಮಸ್ಕಾರ ಮಾಡಿ, ತನ್ನ ಕುಮಾರನೊಂದಿಗೆ ಹೊರಟು ಪಾತಾಳ ದಲ್ಲಿರುವ ತನ್ನ ಅಣ್ಣನಾದ ವಾಸುಕಿಯ ಬಳಿಗೆ ಹೋಗಿ ಸೇರಿಕೊಂಡಳು.

ಗರುತ್ಮಂತನು ಬಲರಾಮನೊಂದಿಗೆ ತನಗಾದ ಪರಾಭವವನ್ನು ಕುರಿತು ಹೇಳಿದನು. "ಹಾಗೇನು? ಚಿಂತಿಸಬೇಡ ಗರುಡಾ. ಆ ಕೋತಿಗೆ ತಕ್ಕ ಶಾಸ್ತಿ ಮಾಡದೆ ಬಿಡಲಾರೆ. ನೀನೆಂದರೇನು, ನಿನ್ನನ್ನು ಕಟ್ಟಿ ಬಿಸುಡುವುದೆಂದರೇನು? ನೀನೀಗಲೇ ಆ ಕೋತಿ ರಾಯನಬಳಿಗೆ ಹೋಗಿ, ಬಲರಾಮದೇವನ ಆಜ್ಞೆ ಯಾಗಿದೆ, ಈಗಲೇ ಬರಬೇಕಂತೆ, ಎಂದು ಹೇಳು!" ಎಂದನು ಗಂಭೀರದಿಂದ.

ಗರುತ್ಮಂತನು ಬಲರಾಮನ ದೂತನಾಗಿ ಹೆದರುತ್ತಾ ಹನುಮಂತನಬಳಿಗೆ ಹೋಗಿ ಹಾಗೆಯೇ ಹೇಳಿದನು. ಹನುಮಂತನು ಅವನ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲೇ ಇಲ್ಲ. ಮುಚ್ಚಿದ ಕಣ್ಣು ತೆರೆಯಲೂ ಇಲ್ಲ. ಗರುತ್ಮಂತನು ರೆಕ್ಕೆಗಳನ್ನು ಬೀಸಿ ಬೀಸಿ, ಕೂಗಿ ಕೂಗಿ ಮತ್ತೆ ಮತ್ತೆ ಅದನ್ನೇ ಹೇಳಿದನು. ಕಡೆಗೆ ತನ್ನ ಮೂಗಿನಿಂದ ಹನುಮಂತ ನನ್ನು ತಿವಿಯಲು ಮುಂದುವರಿದು ಧೈರ್ಯಬಾರದೆ ನಾಲಗೆ ಕಚ್ಚಿಕೊಂಡು, ಸುಮ್ಮನೆ ಹಿಂದಿರುಗಿ ಹೋದನು.

ಆಗ ಬಲರಾಮನೊಂದಿಗೆ ಏನೋ ರಾಜಕೀಯದ ವಿಷಯ ಮಾತಾಡಲು ಬರುವವನಂತೆ ಕೃಷ್ಣನು ಬಂದನು. ಆಗಲೇ ಬಂದ ಗರುತ್ಮಂತನು ಹನು



ಮಂತನು ಎಷ್ಟು ಕರೆದರೂ ಮಾತಾಡಲಿಲ್ಲ ಎಂಬ ಸಂಗತಿಯನ್ನು ಹೇಳಿದನು. ಅದನ್ನು ಕೇಳಿ ಕೃಷ್ಣನು, "ಈಗ ಹೋಗಿ ರಾಮನು ಕರೆಯುತ್ತಾನೆಂದು ಹೇಳು. ಯಾಕೆ ಬರುವುದಿಲ್ಲವೋ ನೋಡುತ್ತೇನೆ" ಎಂದು ಗರುತ್ಮಂತನನ್ನು ತಿರುಗಿ ಹನುಮಂತನಬಳಿಗೆ ಕಳುಹಿಸಿದನು.

ಗರುತ್ಮಂತನು ಹಾಗೆ ಹೇಳಿದ ಕೂಡಲೇ ಹನು ಮಂತನು ತಟ್ಟನೆದ್ದು ಗರುತ್ಮಂತನೊಂದಿಗೆ ದ್ವಾರಕೆಗೆ ಬಂದು, "ರಾಮಾ! ನನ್ನ ರಾಮಾ! ಎಲ್ಲಿರುವೆ?" ಎಂದು ಗಟ್ಟಿಯಾಗಿ ಕೂಗಿದನು.

ಬಲರಾಮನು ಎದ್ದು ಅವನ ಮುಂದೆ ಬಂದು, "ರಾಮನಲ್ಲ, ನಾನು ಬಲರಾಮನು. ನೀನು ಮಾಡಿದ ತಪ್ಪಿಗೆ, ಬಲರಾಮದೇವಾಯನಮಃ ಎಂದು ಮೂರು ಸಾರಿ ಹೇಳಿ ನಮಿಸಿದರೆ ಮಾತ್ರ ನಾನು ಕ್ಷಮಿಸುತ್ತೇನೆ" ಎಂದನು ಕಣ್ಣು ತಿರುಗಿಸುತ್ತಾ. ಹನುಮಂತನಿಗೆ ಜರ್ರನೆ ಕೋಪವೇರಿ, "ಏನೇನು? ನೀನು ಬಲ



ರಾಮನೇ ? ಯಾವ ಅಬಲರಾಮ ನೀನು ?" ಎಂದು ಹಲ್ಲು ತೋರಿಸಿ ಅಣಕಿಸಿದನು.

ಕೂಡಲೇ ಬಲರಾಮನು ತನ್ನ ಹಲಾಯುಧವನ್ನು ಹನುಮಂತನ ಮೇಲೆ ಎತ್ತಿದನು. ತತ್‌ಕ್ಷಣವೇ ಹನುಮಂತನು ಅದನ್ನು ತನ್ನ ಬಾಲದಿಂದ ಹಿಡಿದು ಕಿತ್ತು ದೂರ ಬಿಸುಟನು. ಅವನನ್ನು ಹೊಡೆಯಲು ಬಂದ ಬಲರಾಮನ ಎರಡು ಕೈಗಳನ್ನೂ ಹನುಮಂತನು ಹಿಡಿದೆತ್ತಿ ಸುಳಿಸಿ ಬೀಸುತ್ತಿರಲು ಬಲರಾಮನಿಗೆ ಮೂರ್ಛೆ ಬಂದಿತು. ಆ ಮೂರ್ಛೆಯಲ್ಲಿ ಕನಸಿನಂತೆ ಹಳೆಯ ವೃತ್ತಾಂತವು ಅವನ ಗೋಚರಕ್ಕೆ ಬಂದಿತು.

ಆ ದೃಶ್ಯವೇನಂದರೆ, ರಾಮಪಟ್ಟಾಭಿಷೇಕವಾದ ಮರುಕ್ಷಣದಲ್ಲೇ ಲಕ್ಷ್ಮಣನು ತೂಕಡಿಸಿಬಿದ್ದು ಫಕ್ಕನೆ ನಕ್ಕನು. ಸಭೆಯಲ್ಲಿದ್ದ ಪ್ರತಿಯೊಬ್ಬರೂ ಅದನ್ನು ನೋಡಿ, ತಮ್ಮನ್ನೇ ಲಕ್ಷ್ಮಣನು ಪರಿಹಾಸಮಾಡಿ ನಕ್ಕನೆಂದು ಮುಖಗಳನ್ನು ಕಹಿಮಾಡಿಕೊಂಡರು.

ರಾಮನೂ ಸಿಟ್ಟಿನಿಂದ ಲಕ್ಷ್ಮಣನ ಮೇಲೆ ಕತ್ತಿಯನ್ನೆತ್ತಿದನು. ಆಗ ಹನುಮಂತನು ರಾಮನನ್ನು ತಡೆದು ಲಕ್ಷ್ಮಣನನ್ನು ನಯವಾಗಿ ವಿಚಾರಿಸಿ ಅವನು ನಕ್ಕುದರ ಕಾರಣ ತಿಳಿದು ಸಭೆಯವರನ್ನು ನೋಡಿ ಹೀಗೆಂದನು: "ವನವಾಸಕಾಲದಲ್ಲಿ ಸೀತಾರಾಮರನ್ನು ಸರ್ವಕಾಲದಲ್ಲಿಯೂ ಲಕ್ಷ್ಮಣನು ಕಣ್ಣುಬಿಡಿಸಿ ಹದಿನಾಲ್ಕು ವರ್ಷಗಳವರೆಗೆ ನಿದ್ರೆಯನ್ನೂ ಆಹಾರವನ್ನೂ ಬಿಟ್ಟು ಕಾವಲು ಕಾದುಕೊಂಡಿದ್ದನು. ರಾಮನಿಗೆ ಪಟ್ಟಾಭಿಷೇಕವಾದ ಕೂಡಲೇ ನಿದ್ರೆಯನ್ನು ಬರಲು ಹೇಳಿದ್ದ. ಅವನ ನಿದ್ದೆಯನ್ನು ಅವನ ಅರ್ಧಾಂಗಿ ಊರ್ಮಿಳೆ ಕೂಡಾ ಕಳೆದಿದ್ದಳು. ಹದಿನಾಲ್ಕು ವರ್ಷ ನಿದ್ರಾಹಾರಬಿಟ್ಟವನೇ ಇಂದ್ರಜಿತ್ತುವನ್ನು ಕೊಲ್ಲಬಲ್ಲನೆಂದು ವಿಧಿನಿಯತಿ ಕೂಡಾ ಇತ್ತು. ಆ ವಿಧದಲ್ಲಿ ಕಟ್ಟುಗೊಂಡಿದ್ದ ಲಕ್ಷ್ಮಣನ ನಿದ್ದೆ, ಪಟ್ಟಾಭಿಷೇಕವಾದ ಮರುಕ್ಷಣದಲ್ಲೇ ತೂಕಡಿಕೆಯಾಗಿ ಬಂದುದನ್ನು ನೆನೆದು ಲಕ್ಷ್ಮಣನು ನಕ್ಕನು."

ಹನುಮಂತನು ಹೇಳಿದುದನ್ನು ಕೇಳಿ ರಾಮನು, "ಹಾಗಾದರೆ ವನವಾಸಕಾಲದಲ್ಲಿ ಒಂದು ದಿನ ನಾನು ಲಕ್ಷ್ಮಣನಿಗೆ ತಿನ್ನಲು ಒಂದು ಬಾಳೇ ಹಣ್ಣು ಕೊಟ್ಟಿದ್ದೆನಲ್ಲಾ ? ಅದೇನಾಯಿತು ?" ಎಂದು ಕೇಳಿದನು.

ಆಗ ಲಕ್ಷ್ಮಣನು ಕತ್ತಿಯಿಂದ ತನ್ನ ತೊಡೆಯನ್ನು ಸೀಳಿ ಅದರೊಳಗಿದ್ದ ಬಾಳೇ ಹಣ್ಣನ್ನು ತೆಗೆದು, "ಅಣ್ಣನು ಸ್ವಂತ ಕೈಯಿಂದ ಕೊಟ್ಟುದನ್ನು ರಾಮಪ್ರಸಾದವೆಂದು ಭದ್ರಪಡಿಸಿ ಇಟ್ಟುಕೊಂಡಿದ್ದೇನೆ. ಈಗ ಇದರಿಂದಲೇ ಉಪವಾಸವನ್ನು ಮುಗಿಸಿಕೊಳ್ಳುತ್ತೇನೆ" ಎಂದು ಹೇಳಿ ಆ ಹಣ್ಣನ್ನು ನುಂಗಿದನು.

ರಾಮನು ಲಕ್ಷ್ಮಣನನ್ನು ಗಾಢಾಲಿಂಗನ ಮಾಡಿಕೊಂಡು ಆನಂದಬಾಷ್ಪ ಒಸರಿಸುತ್ತ, "ತಮ್ಮಾ, ಬರುವ ಜನ್ಮದಲ್ಲಿ ನಾನು ನಿನ್ನ ತಮ್ಮನಾಗಿ ಹುಟ್ಟಿ

ನಿನ್ನ ಋಣ ತೀರಿಸಿಕೊಳ್ಳುತ್ತೇನೆ" ಎಂದು ಸಭೆಯವ ರೆಲ್ಲಾ ಕೇಳುವಂತೆ ಗಟ್ಟಿಯಾಗಿ ಹೇಳಿದನು.

ಈ ಸ್ವಪ್ನ ದೃಶ್ಯದಿಂದ ಬಲರಾಮನಿಗೆ ತಾನು ಲಕ್ಷ್ಮಣನಾಗಿದ್ದವನೆಂಬ ಪೂರ್ವಜ್ಞಾನ ಬಂದಿತು. ಮೂರ್ಛೆಯಿಂದೆಚ್ಚೆತ್ತು ಹನುಮಂತನನ್ನು ನೋಡಿ, "ಸಂಜೀವರಾಯಾ! ಆ ದಿನ ಸಂಜೀವಿನಿಯನ್ನು ತಂದು ನನ್ನನ್ನು ಮೂರ್ಛೆಯಿಂದ ಎಬ್ಬಿಸಿದೆ. ಈ ದಿನ ಮೂರ್ಛೆಯಲ್ಲಿ ನಾನಾರೆಂಬುದನ್ನು ನನಗೆ ತಿಳಿಯುವ ಹಾಗೆ ಮಾಡಿದೆ. ಚಿರಂಜೀವಿಯಾದ ಮಹಾ ಮಹಿಮನೇ, ಬಾ, ನಿನ್ನ ರಾಮನನ್ನು ನೋಡುವೆ ಯಂತೆ!" ಎಂದು ಹನುಮಂತನನ್ನು ಕೃಷ್ಣನಬಳಿಗೆ ಕರೆದೊಯ್ದನು.

ಕೃಷ್ಣನು ಅವನನ್ನು ನೋಡಿದ ಕೂಡಲೇ ಕೋಪ ದಿಂದ "ಏನೋ, ಸೊಕ್ಕಿದ ಕೋತಿರಾಯಾ! ನನ್ನಣ್ಣ ನಂಥವನನ್ನೇ ಧಿಕ್ಕಾರ ಮಾಡುವಿಯಾ? ತಾಳಿಕೋ" ಎಂದು ಮುಷ್ಟಿಬಿಗಿದು ಯುದ್ಧಕ್ಕೆ ಬರುವವನಂತೆ ಸಿಡಿದೆದ್ದನು. ಹನುಮಂತನೂ ಬಿಡಲಿಲ್ಲ.

ಕೃಷ್ಣಾಂಜನೇಯರ ಯುದ್ಧವು ಬಹಳ ಹೊತ್ತಿನ ವರೆಗೆ ನಡೆಯಿತು. ತನ್ನೊಂದಿಗೆ ಅತ್ಯಂತಲಾಘವ ದಿಂದ ಹೋರಾಡುತ್ತಿರುವ ಕೃಷ್ಣನ ಪೌರುಷವನ್ನೂ ವೇಗವನ್ನೂ ಒಳಗೊಳಗೇ ಮೆಚ್ಚಿಕೊಳ್ಳುತ್ತ ಹನು ಮಂತನು, ತನ್ನ ಸತ್ವವನ್ನೆಲ್ಲಾ ಸೇರಿಸಿ ಒಂದು ಗುದ್ದನ್ನು ಕೃಷ್ಣನ ಮೇಲೆ ಎರಗಿಸಿದನು. ಅದರಿಂದ ಕೃಷ್ಣನು ಹಿಂದೆ ಮಗುಚಿ ಹಾಗೆಯೇ ಎದ್ದು ಕೈ ಗಳನ್ನು ಅಲುಗಿಸುತ್ತ, ಹನುಮಂತನು ಆಯಾಸ ಗೊಂಡ ಸಂಧಿ ನೋಡಿ, ಸಿಂಹದಂತೆ ಹಾರಿ ಅವನ ಎದೆಯ ಮೇಲೆ ಮುಷ್ಟಿಘಾತ ಕೊಟ್ಟನು. ಆಗ ಕೃಷ್ಣನ ಪಾದವು ಹನುಮಂತನ ಮೇಲೆ ತಾಗಿತು.

ಆ ಪಾದಸ್ಪರ್ಶದಿಂದ ಹನುಮಂತನ ಸರ್ವಾಂ ಗವೂ ಪುಲಕಿತವಾಗಿ, ರಾಮನೇ ಕೃಷ್ಣನಾಗಿ ಅವ ತರಿಸಿದವನೆಂದು ಗೊತ್ತಾಗಿ ಹೋಯಿತು. ಹಿಂದೆ



ಲಂಕೆಯಲ್ಲಿ ಸೀತೆಯ ಅಗ್ನಿಪ್ರವೇಶಕ್ಕೆ ಮೊದಲು ರಾಮನ ಬಾಯಿಯಿಂದ ಹೊರಟ ಪರುಷವಾಕ್ಯ ಗಳಿಂದ ಸೀತೆ ಕಣ್ಣೀರು ಸುರಿಸಿಕೊಂಡಿದ್ದಾಗ, ಹನು ಮಂತನಿಗೆ ರಾಮನ ಮೇಲೆ ಬಹಳ ಕೋಪ ಬಂದಿತ್ತು. ಆಗ ಅವನು ಮುಷ್ಟಿಗಳನ್ನು ಬಿಗಿದು "ರಾಮಾ! ನನ್ನೊಂದಿಗೆ ಯುದ್ಧಮಾಡಿ ಗೆಲ್ಲು!" ಎಂದು ಹೇಳಿದ್ದನು.

ಆಗ ರಾಮನು, "ಈಗ ನಾನು ನಿನ್ನೊಂದಿಗೆ ಯುದ್ಧಮಾಡುವಷ್ಟು ಶಕ್ತಿಹೊಂದಿಲ್ಲ. ಮುಂದ ಅದಕ್ಕೂ ಒಂದು ಕಾಲ ಬರುತ್ತೆ, ತಾಳಿಕೋ" ಎಂದಿದ್ದನು.

ಆ ಸನ್ನಿವೇಶವು ಹನುಮಂತನಿಗೆ ಈಗ ನೆನಪಿಗೆ ಬಂತು. ಆಗ ಅವನು ಕೃಷ್ಣನನ್ನು ನೋಡುತ್ತ "ಓಹೋ! ಅವನೇ ನೀನೋ? ಆಗ ಹೇಳಿದ ಮಾತನ್ನೇನೋ ಈಗ ನಡೆಸಿದೆ. ಇದು ಸಾಲದು. ರಾಮನಾಗಿಯೇ ನನಗೆ ತೋರಿ ಅನುಗ್ರಹಿಸು!"



ಎಂದು ತಲೆವಾಗಿ ಕೈಮುಗಿದು ಬೇಡಿಕೊಂಡನು. "ಹನುಮಾ ! ಸ್ವಲ್ಪ ನಿಲ್ಲು. ಲಕ್ಷ್ಮಣನು ಇಲ್ಲಿಯೇ ಇರುವನು. ಸೀತೆ ಇನ್ನು ಮೇಲೆ ಬರಬೇಕಷ್ಟೆ" ಎಂದು ಹೇಳಿ ಕೃಷ್ಣನು ಸೀತೆಯಾಗಿ ಬರುವಂತೆ ಸತ್ಯಭಾಮೆಗೆ ಸಮಾಚಾರ ಕಳುಹಿಸಿದನು.

ಪ್ರತಿ ಜನ್ಮದಲ್ಲಿಯೂ ಕೃಷ್ಣನಿಗೆ ತಾನೇ ನಿಜವಾದ ಪತ್ನಿ ಎಂದುಕೊಂಡು ಗರ್ವದಲ್ಲಿದ್ದ ಸತ್ಯಭಾಮೆ "ಅದಕ್ಕೇನಾಗಬೇಕು, ಇದೋ ಬಂದೆ !" ಎಂದು ಹೇಳಿ ಮೈ ತುಂಬಾ ದಿವ್ಯಾಭರಣಗಳನ್ನು ಧರಿಸಿ, ತಲೆ ತುಂಬಾ ಪಾರಿಜಾತಪುಷ್ಪಗಳನ್ನು ಮುಡಿದು, ಠೀವಿಯೂ ಒಯ್ಯಾರವೂ ಕಲೆತ ನಡಿಗೆಯಿಂದ ಬಂದು ಕೃಷ್ಣನ ಪಕ್ಕದಲ್ಲಿ ನಿಂತಳು.

ಹನುಮಂತನು ಅವಳನ್ನು ನೋಡಿದ ಕೂಡಲೇ "ಓಹೊ ! ನೀನು ಚಂದ್ರಸೇನೆಯಲ್ಲವೇನಮ್ಮಾ ? ಆ ದಿನ ರಾಮನು ಕೃಷ್ಣಾವತಾರ ಕಾಲದಲ್ಲಿ ಅಷ್ಟ ಪತ್ನಿಯರಲ್ಲಿ ಒಬ್ಬಳಾಗಿ ನಿನ್ನನ್ನು ಮದುವೆಯಾಗುತ್ತೇನೆಂದು ಹೇಳಿದ್ದನಲ್ಲಾ ? ರಾಮನು ಹೇಳಿದ ಮಾತು ನಡೆಸಿದನು. ಧನ್ಯಳಾದೆಯಮ್ಮಾ ನೀನು !" ಎಂದು ಕೈಮುಗಿದನು.

ಹನುಮಂತನ ಮಾತು ಕೇಳಿದ ಕೂಡಲೇ ಸತ್ಯಭಾಮೆಗೆ ಪೂರ್ವಸ್ಮೃತಿಯುಂಟಾಯಿತು. ಅವಳ ಗರ್ವ ಹೇಳ ಹೆಸರಿಲ್ಲದೆ ಹೋಯಿತು. ಅವಳು ಅಲ್ಲಿಂದ ಸೀದಾ ರುಕ್ಮಿಣಿಯ ಬಳಿಗೆ ಹೋಗಿ, "ಅಕ್ಕ ! ಸೀತೆಯಾಗಿ ನೀನು ಹನುಮಂತನನ್ನು ಅನುಗ್ರಹಿಸಬೇಕಂತೆ ! ಹೋಗು" ಎಂದು ಬೇಡಿಕೊಂಡಳು.

ಅದರಂತೆ ರುಕ್ಮಿಣಿ ಹೇಗಿದ್ದಳೋ ಹಾಗೆಯೇ ಬಂದು ಕೃಷ್ಣನ ಬದಿಯಲ್ಲಿ ನಿಂತಳು. ಕೃಷ್ಣನು ಕೋದಂಡರಾಮನಾಗಿ ಹನುಮಂತನ ತಲೆನೇವಿ ಬೆನ್ನು ತಡವಿ ಆಶೀರ್ವದಿಸಿದನು. ಹನುಮಂತನು ರಾಮನ ಪಾದವನ್ನು ತದೇಕ ದೃಷ್ಟಿಯಿಂದ ನೋಡುತ್ತ ಕೈಜೋಡಿಸಿ ಬ್ರಹ್ಮಾನಂದದಲ್ಲಿ ಮುಳುಗಿಹೋದನು. ಸೀತೆ, "ಚಿರಂಜೀವಿ! ನಿನ್ನ ನೋಡಿ ಸಂತೋಷವಾಯಿತಪ್ಪಾ!" ಎಂದಳು.

ಆಮೇಲೆ ಕೃಷ್ಣನು ರಾಮಾವತಾರದ ರೂಪವನ್ನು ಉಪಸಂಹರಿಸಿ ಹನುಮಂತನ ಬೆನ್ನುತಟ್ಟಿ, "ಹನುಮಾ, ಇನ್ನು ನೀನು ಹೋಗಿ ಹಿಮಾಲಯದ ಸಾನು ಪ್ರದೇಶದಲ್ಲಿರುವ ಕದಳೀವನದಲ್ಲಿರು. ಅಲ್ಲಿಗೆ ನಿನ್ನ ತಮ್ಮನಾಗಬೇಕಾದ ವಾಯುಕುಮಾರ ಭೀಮನು ಬರುತ್ತಾನೆ. ಅವನಿಗೆ ಗದಾಯುದ್ಧ ಮಲ್ಲಯುದ್ಧಗಳಲ್ಲಿರುವ ಸೂಕ್ಷ್ಮವಾದ ಹಿಡಿತಪಟ್ಟು ಮುಂತಾದುವನ್ನು ಮಾಡಿ ತೋರಿಸಿ ಕಲಿಸಿಕೊಡು" ಎಂದು ಹೇಳಿದನು.

ಆಗ ಸತ್ಯಭಾಮೆ ಹನುಮಂತನ ಮುಂದೆ ಬಂದು, "ಹನುಮಾ, ಆ ದಿನ ನೀನು ರಾಮನನ್ನು ನನ್ನ ಹತ್ತಿರ ಕರಕೊಂಡು ಬಂದು, ಈ ದಿನದ ನನ್ನ ಭಾಗ್ಯಗಳಿಗೆ ಕಾರಣನಾದ ನಿನಗೆ ನನ್ನ ಕೃತಜ್ಞತೆ ಹೇಳಿಕೊಳ್ಳುತ್ತೇನೆ" ಎಂದು ನಮಸ್ಕಾರ ಮಾಡಿದಳು.

ಹನುಮಂತನು ಅವಳಿಗೆ ತಿರುಗಿ ನಮಸ್ಕಾರ ಮಾಡುತ್ತ, "ಅಮ್ಮಾ, ನೀನು ಸತ್ಯಭಾಮೆಯಾಗಿರುವೆ. ದೇವರು ಸತ್ಯಕ್ಕೆ ಯಾವಾಗಲೂ ವಶನಾಗಿರುತ್ತಾನೆಂಬ ಅರ್ಥವು ಸ್ಫುರಿಸುವ ಹಾಗೆ ಕೃಷ್ಣನು ನಿನ್ನನ್ನು ವರಿಸಿ ನಿನ್ನ ಮುದ್ದು ಮುಂಚ್ಚಟೆಗಳನ್ನು ತೀರಿಸುತ್ತ ಸತ್ಯಪತಿ ಎಂಬ ಬಿರುದು ಪಡೆದಿದ್ದಾನೆ. ಧನ್ಯಳಾದೆಯಮ್ಮ ! ನೀನು ನನಗೆ ಸೀತೆಗೆ ಸಮಾನಳು !" ಎಂದನು.

ಅವನ ಮಾತು ಕೇಳಿ ಸತ್ಯಭಾಮೆ ಆನಂದಪುಲಕಿತೆಯಾಗಿ ಕೃಷ್ಣನ ಪಾದಗಳನ್ನು ಹಿಡಿದುಕೊಂಡು, "ಇಷ್ಟು ಕಾಲದ ಮೇಲೆ ಹನುಮಂತನ ಮಾತುಗಳಿಂದ ನಿಜಸಂಗತಿಯನ್ನು ತಿಳಿದುಕೊಂಡೆನು. ನನ್ನಲ್ಲಿ ಮನೆಮಾಡಿಕೊಂಡಿದ್ದ ಗರ್ವವು ಪೂರಾ ತೊಳೆದು ಹೋಯಿತು" ಎಂದಳು.

ಹನುಮಂತನು ರುಕ್ಮಿಣೀ ಸತ್ಯಭಾಮೆಯರೊಂದಿಗೆ ಕೂಡಿದ ಕೃಷ್ಣನಿಗೆ ನಮಸ್ಕಾರ ಮಾಡಿ ಹೊರಡಲು ಸಿದ್ಧನಾದಾಗ ಬಲರಾಮನು ಅವನನ್ನು ಆಲಿಂಗಿಸಿಕೊಂಡು, "ಸಂಜೀವರಾಯಾ ! ನಿನ್ನಿಂದಲೇ ನನ್ನನ್ನು ನಾನು ತಿಳಿದುಕೊಂಡೆ. ಅಹಂಕಾರವನ್ನು ಕಳೆದುಕೊಂಡೆ. ನಿನಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು !" ಎಂದು ಹೇಳಿದನು. ಗರುತ್ಮಂತನೂ ಸಹ ಹನುಮಂತನಿಗೆ ಪ್ರಣಾಮ ಮಾಡಿ, "ವೀರಹನುಮಾನ್ ! ಕ್ಷೀರಸಾಗರದಲ್ಲಿ ತನ್ನ ಸನ್ನಿಧಾನದಲ್ಲಿ ನನಗೆ ಜತೆಗಾರನಾಗಿ ನೀನು ಕೂಡಾ ಬಂದು ಕೂಡುವೆ ಎಂದು ಮಹಾವಿಷ್ಣು ನನ್ನೊಂದಿಗೆ ಹೇಳಿರುವುದು ಈಗ ನೆನಪಿಗೆ ಬರುತ್ತದೆ. ನಾನೂ ನೀನೂ ಭೇದವಿಲ್ಲದವರು" ಎಂದು ಹೇಳಿ, ಹನುಮಂತನೊಂದಿಗೆ ಕದಳೀವನದವರೆಗೂ ಹೋದನು.

ಹಿಮಾಲಯದ ಸಾನುಭೂಮಿಯ ಪ್ರದೇಶದಲ್ಲಿದ್ದ ಕದಳೀವನವು ಬಾಳೆಯ ಗಿಡಗಳಿಂದ, ಇನ್ನೂ ಅನೇಕ ಬಗೆಯ ಫಲವೃಕ್ಷಗಳ ತೋಪುಗಳಿಂದ ತುಂಬಾ ಆಹ್ಲಾದಕರವಾಗಿತ್ತು. ಹಿಮ ಶಿಖರಗಳಿಂದ ಜಾರಿ ಬರುವ ಚಿಕ್ಕ ಚಿಕ್ಕ ಬೆಟ್ಟದ ತೊರೆಗಳು ಬೆಳ್ಳಿಯ ರೇಖೆಗಳಂತೆ ಅಲ್ಲಲ್ಲಿ ಹೊಳೆಯುತ್ತಿದ್ದುವು.

ಅಂತಹ ಸೊಗಸಾದ ಕದಳೀವನವನ್ನು ಪ್ರವೇಶಿಸಿ ಹನುಮಂತನು ಹಣ್ಣು ಮುದಿಕೋತಿಯ ರೂಪದಲ್ಲಿ ದೊಡ್ಡದೊಂದು ಬಾಳೇ ಮರದಕಾಂಡಕ್ಕೆ ಒರಗಿಕೊಂಡು ಕಾಲುಗಳನ್ನು ಚಾಚಿ ಕುಳಿತುಕೊಂಡನು. ಅವನ ಬಾಲವು ದಾರಿಗೆ ಅಡ್ಡವಾಗಿ ಸುತ್ತಿಕೊಂಡು ಬಿದ್ದಿತ್ತು. ಈ ಚಂದದಲ್ಲಿ ಹನುಮಂತನು ಕಣ್ಣುಗಳನ್ನು ಮುಚ್ಚಿಕೊಂಡು ರಾಮನನ್ನು ಧ್ಯಾನಿಸುತ್ತ ರಾಮನಾಮವನ್ನು ಜಪಿಸುತ್ತ, ಹಾಗೆಯೇ ಸುಮ್ಮನೆ ಕುಳಿತಿರಲು, ಅವನನ್ನು ನೋಡಿ ತಲೆ ದೂಗುತ್ತಾ ಗರುತ್ಮಂತನು ದ್ವಾರಕೆಗೆ ಹಿಂದಿರುಗಿದನು.

